ಶ್ರೀ

# ಶ್ರೀ ಗೋಪೀಗೀತ, ವೇಣುಗೀತ ಮತ್ತು ಭ್ರಮರಗೀತ

ಮೂಲಶ್ಲೋಕಗಳು ಹಾಗೂ ಶ್ರೀ ಸತ್ಯಧರ್ಮತೀರ್ಥರ ಟಿಪ್ಪಣಿ ಆಧಾರಿತ ಭಾವಾನುವಾದದೊಡನೆ



ಶ್ರೀ ಸತ್ಯಧರ್ಮತೀರ್ಥರ ವೃಂದಾವನ, ಹೊಳೆಹೊನ್ನೂರು


ಅನುವಾದಕರು :

ಶ್ರೀ ಹಯವದನ ಪುರಾಣಿಕರು



ಶ್ರೀ ಸತ್ಯಧರ್ಮತೀರ್ಥ ಸೇವಾವೃಂದ

28, ರಂಗರಾವ್ ರಸ್ತೆ, ಶಂಕರಪುರಂ, ಬೆಂಗಳೂರು-560 004

ರಘುನಾಥನ್. ಬಿ.ವಿ.
13ನೇ ಮಾರ್ಚ್ 1997.

ಶ್ರೀಃ



# ಶ್ರೀ ಗೋಪೀಗೀತ, ವೇಣುಗೀತ ಮತ್ತು ಭ್ರಮರಗೀತ

ಮೂಲಶ್ಲೋಕ ಹಾಗೂ ಶ್ರೀ ಸತ್ಯಧರ್ಮತೀರ್ಥರ ಟಿಪ್ಪಣಿ
ಆಧಾರಿತ ಭಾವಾನುವಾದದೊಡನೆ

ಅನುವಾದಕರು :

**ಶ್ರೀ ಹಯವದನ ಪುರಾಣಿಕರು**
ಪ್ರಾಚಾರ್ಯರು, ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು

**ದರ್ಶನರತ್ನ ಪ್ರೊ|| ಕೆ. ಟಿ. ಪಾಂಡುರಂಗಿಯವರ
ಮುನ್ನುಡಿಯೊಂದಿಗೆ**

**ಶ್ರೀ ಸತ್ಯಧರ್ಮತೀರ್ಥ ಸೇವಾವೃಂದ**
28, ರಂಗರಾವ್ ರಸ್ತೆ, ಶಂಕರಪುರಂ, ಬೆಂಗಳೂರು-560 004

Gopi Geetha, Venu Geetha & Bhramara Geetha—with Kannada Anuvada based on Sri Sathyadharmatheertha's Tippani

Anuvada : Sri Hayavadana Puranik, M.A.
Principal, Sri Purnaprajna Vidyapeetha
Kattariguppa Road, Bangalore-28

Second Revised Edition : 1991

Copies Printed : 1000

Price : Rs. 3-00

Printed at : Parimala Mudranalaya
Hanumanthanagar, Bangalore-19
Phone : 625516

For Copies contact :

The Sanchalak, (N. Narayana Murthy), Sri Sathyadharma-theeratha, Seva Vrinda, 28, Ranga Rao Road, Shankarapuram Bangalore-560 004

# ಮುನ್ನುಡಿ

ಭಾಗವತದಲ್ಲಿ ಬರುವ ಗೋಪೀಗೀತ, ವೇಣುಗೀತ, ಭ್ರಮರಗೀತ, ಎಂಬ ಸ್ತೋತ್ರಗಳು ಅಪೂರ್ವವಾದ ಆಧ್ಯಾತ್ಮಿಕ ಅರ್ಥಗಳಿಂದ ತುಂಬಿದ ಸ್ತೋತ್ರಗಳು. ಇವು ಮೇಲೆ ನೋಡಲು ಗೋಪಿಕೆಯರು ಶ್ರೀಕೃಷ್ಣನ ವಿಷಯದಲ್ಲಿ ಶೃಂಗಾರ ಭಾವನೆಯನ್ನು ವ್ಯಕ್ತಪಡಿಸುವಂತೆ ತೋರುವವು. ಆದರೆ ಆಳವಾಗಿ ಇವುಗಳ ಅರ್ಥವನ್ನು ಪರಿಶೀಲಿಸಿದರೆ ಇವುಗಳಲ್ಲಿಯ ಆಧ್ಯಾತ್ಮಿಕ ಅಂಶವು ಸ್ಪಷ್ಟವಾಗುವದು. ಈ ಆಧ್ಯಾತ್ಮಿಕ ಅರ್ಥವು ಸಾಮಾನ್ಯರಿಗೆ ತಿಳಿಯುವಂಥವಲ್ಲ; ಇದನ್ನು ಜ್ಞಾನಿಗಳೇ ತಿಳಿಸಿ ಹೇಳಬೇಕು. ಹೀಗೆ ತಿಳಿಸಿಹೇಳುವ ಮಹದುಪಕಾರವನ್ನು ಶ್ರೀ ೧೦೮ ಶ್ರೀ ಸತ್ಯಧರ್ಮತೀರ್ಥ ಶ್ರೀಪಾದಂಗಳವರು ಮಾಡಿದ್ದಾರೆ. ಶ್ರೀ ಶ್ರೀಗಳವರು ಈ ಮೂರು ಗೀತಗಳಿಗೆ ಅಪೂರ್ವವಾದ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಒಂದೊಂದು ಶ್ಲೋಕಕ್ಕೂ ಮೇಲೆ ತೋರುವ ಅರ್ಥ, ಆಧ್ಯಾತ್ಮಿಕ ಅರ್ಥಗಳನ್ನು ತೋರಿಸಿದ್ದಾರೆ. ಈ ವ್ಯಾಖ್ಯಾನಗಳನ್ನು ಶ್ರೀ ಸವಣೂರು ಗೋವಿಂದರಾಯರು ಮುದ್ರಿಸಿರುವರು; ಆದರೆ ಈಗ ಪ್ರತಿಗಳು ಉಪಲಬ್ಧವಿಲ್ಲ ಈ ಕೊರತೆಯನ್ನು ತುಂಬಲು ಶ್ರೀ ಶ್ರೀ ಸತ್ಯಧರ್ಮತೀರ್ಥರ ಪೂರ್ವಾಶ್ರಮದ ವಂಶದವರಾದ ಶ್ರೀ ನವರತ್ನ ನಾರಾಯಣ ಮೂರ್ತಿಗಳು ಇವುಗಳನ್ನು ಮತ್ತೆ ಪ್ರಕಟಿಸಬೇಕೆಂದು ಯೋಚಿಸಿದರು. ಆದರೆ ಈ ಸಂಸ್ಕೃತ ವ್ಯಾಖ್ಯಾನಗ್ರಂಥಗಳು ಅನೇಕರಿಗೆ ತಿಳಿಯಲಿಕ್ಕಿಲ್ಲ ಎಂಬ ಕಾರಣದಿಂದ ಈ ವ್ಯಾಖ್ಯಾನವನ್ನೇ ಅನುಸರಿಸಿ ಕನ್ನಡ ಅನುವಾದವನ್ನು ಸಿದ್ಧಪಡಿಸಲು ಪಂಡಿತವರ್ಯ ಶ್ರೀ ಹಯವದನ ಪುರಾಣಿಕರನ್ನು ಪ್ರಾರ್ಥಿಸಿದರು. ಅವರು ಪ್ರಕೃತದಲ್ಲಿ 'ಗೋಪೀಗೀತ' 'ವೇಣುಗೀತ' ಈ ಎರಡು ಗೀತಗಳ ಕನ್ನಡ ಅನುವಾದವನ್ನು ಸಿದ್ಧಪಡಿಸಿದ್ದಾರೆ. ಈ ಅನುವಾದದಲ್ಲಿ ಶ್ರೀ ಸತ್ಯಧರ್ಮರ ವ್ಯಾಖ್ಯಾನದಲ್ಲಿಯ ಎಲ್ಲ ಅಂಶಗಳನ್ನೂ ವಿವರಿಸಿದ್ದಾರೆ. ಆಧ್ಯಾತ್ಮಿಕ ಅಂಶ, ವ್ಯಾಕರಣಾಂಶ, ಕಾವ್ಯಮಾಧುರ್ಯ ಎಲ್ಲವನ್ನೂ ವಿವರಿಸಿದ್ದಾರೆ. ಈ ವಿಶೇಷಾರ್ಥಗಳು ಆಯಾ ಪದಗಳಿಂದ ಹೇಗೆ ಹೊರಡುತ್ತವೆ ಎಂಬುದನ್ನು ತೋರಿಸುವ ಪದಚ್ಛೇದ, ವ್ಯುತ್ಪತ್ತಿ ಎಲ್ಲವನ್ನೂ ಕೊಟ್ಟಿದ್ದಾರೆ. ಆದ್ದರಿಂದ ಸಂಸ್ಕೃತದಲ್ಲಿಯ ವ್ಯಾಖ್ಯಾನವನ್ನು ಓದುವುದರಿಂದ ದೊರೆಯುವ ಎಲ್ಲ ಪ್ರಯೋಜನಗಳೂ ಇದರಿಂದ ದೊರೆಯುತ್ತವೆ.

ಈ ಗೀತೆಗಳನ್ನು ಪ್ರತಿನಿತ್ಯ ಸಾಯಂಕಾಲ ಮಂಗಳಾರತಿಯ ಕಾಲದಲ್ಲಿ ಹೇಳುವ ಪರಿಪಾಠವು ಅನೇಕ ಮನೆತನಗಳಲ್ಲಿ ಇತ್ತು. ಈಗಲೂ ಕೆಲವರಲ್ಲಿ ಇರಬಹುದು. ಹೀಗೆ ಹೇಳುವಾಗ ಅರ್ಥವನ್ನು ತಿಳಿದುಕೊಂಡು ಹೇಳಿದರೆ ಇನ್ನೂ ಪ್ರಯೋಜನವಾಗುವುದು. ಹೀಗೆ ಅರ್ಥ ತಿಳಿದುಕೊಂಡು ಹೇಳಲು ಈ ಅನುವಾದ ತುಂಬ ಪ್ರಯೋಜನಕಾರಿಯಾಗಿದೆ. ಈ ಕನ್ನಡ ಅನುವಾದವನ್ನು ಮಾಡಿದ ಶ್ರೀ ಹಯವದನ ಪುರಾಣಿಕರನ್ನೂ ಇದನ್ನು ಪ್ರಕಟಿಸಿದ ಶ್ರೀ ನವರತ್ನ ನಾರಾಯಣ ಮೂರ್ತಿಗಳನ್ನೂ ಶ್ರೀಹರಿವಾಯುಗುರುಗಳು ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆವು.

ಜನವರಿ 1985 ದರ್ಶನರತ್ನ ಪ್ರೊ|| ಕೆ. ಟಿ. ಪಾಂಡುರಂಗಿ

ಬೆಂಗಳೂರು-4 ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾನಿಲಯ

# ಕೃತಜ್ಞತೆ

ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ।
ಜಯತ್ಯಮಿತಸದ್ ಜ್ಞಾನ ಸುಖಶಕ್ತಿಪಯೋನಿಧಿಃ ॥

ಶ್ರೀ ಮದ್ಭಾಗವತ ದಶಮಸ್ಕಂಧದಿಂದ ಉದ್ಧೃತವಾದ 'ಶ್ರೀ ಗೋಪೀಗೀತ' ಹಾಗೂ 'ಶ್ರೀ ವೇಣುಗೀತ' ಇವುಗಳ ಮೂಲಶ್ಲೋಕ, ಶ್ರೀ ಸತ್ಯಧರ್ಮತೀರ್ಥರ ಟಿಪ್ಪಣಿಯನ್ನು ಅನುಸರಿಸಿದ ಭಾವಾನುವಾದವು ಈಗ ತಮ್ಮ ಕೈಯಲ್ಲಿದೆ. ಈ ಅನುವಾದವನ್ನು ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಚಾರ್ಯರಾದ ಶ್ರೀ ಹಯವದನ ಪುರಾಣಿಕರು, ಬೇಡಿದೊಡನೆ ಸಹೃದಯದಿಂದ ಚೊಕ್ಕವಾಗಿ ಮಾಡಿಕೊಟ್ಟಿದ್ದಾರೆ. ಕಾಲಾವಕಾಶದ ಕೊರತೆ ಹಾಗೂ ಮೂಲಪಾಠದ ಹಸ್ತಪ್ರತಿ ತಾಳೆ ನೋಡಲು ಸಕಾಲದಲ್ಲಿ ಸಿಗದ ಕಾರಣ ಏನಾದರೂ ತಪ್ಪುಗಳು ನುಸುಳಿದ್ದರೆ, ಓದುಗರು ದಯಮಾಡಿ ತಿಳಿಸಿದಲ್ಲಿ ಅದನ್ನು ಮುಂದಿನ ಮುದ್ರಣದಲ್ಲಿ ಸರಿಪಡಿಸಲಾಗುವುದು.

ಅನುವಾದಕರಿಗೂ. ಮುನ್ನುಡಿಯನ್ನು ಬರೆದುಕೊಟ್ಟು, ಆಶೀರ್ವದಿಸಿದ ಹಿರಿಯರಾದ ದರ್ಶನರತ್ನ ಶ್ರೀ ಕೆ. ಟಿ. ಪಾಂಡುರಂಗಿಯವರಿಗೂ ಸವಿನಯ ಪೂರ್ವಕ ವಂದನೆಗಳು. ಈ ಕೃತಿ ಹೊರಬರಲು ಸಹಾಯಕರಾದ ಮಿತ್ರರ ಮತ್ತು ಸಕಾಲದಲ್ಲಿ ಇದನ್ನು ಅಂದವಾಗಿ ಮುದ್ರಿಸಿಕೊಟ್ಟ ಮುದ್ರಣ ಸಂಸ್ಥೆಗಳವರ ನೆರವನ್ನು ನಾನು ಈ ಸಂದರ್ಭದಲ್ಲಿ ನೆನೆಯಬೇಕಾದ್ದು ನನ್ನ ಕರ್ತವ್ಯ; ಅವರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಉಡುಪಿಯಲ್ಲಿ ಶ್ರೀಕೃಷ್ಣವಿಗ್ರಹ ಪ್ರತಿಷ್ಠಾಪನೆಯಾದುದರ ಏಳನೆಯ ಶತಮಾನ ಉತ್ಸವದ ಸಂದರ್ಭದಲ್ಲಿ ಈ ಕೃತಿಯು ಪ್ರಕಾಶನವಾಗುತ್ತಿರುವುದು ಶುಭಕರ.

ಇದನ್ನು ಸಹೃದಯರು ಆದರದಿಂದ ಸ್ವಾಗತಿಸುವರೆಂದು ನಂಬಿದ್ದೇನೆ.

ಜನವರಿ 1985
ಬೆಂಗಳೂರು-4

ನವರತ್ನ ನಾರಾಯಣಮೂರ್ತಿ

## ಎರಡನೆಯ ಮುದ್ರಣ

ಕಾರಣಾಂತರಗಳಿಂದ ಬಿಟ್ಟ ಭ್ರಮರಗೀತೆಯ ಅನುವಾದ ಈ ಪರಿಷ್ಕೃತ ಮುದ್ರಣದಲ್ಲಿ ಸೇರಿದೆ. ಅಭಿಮಾನಿಗಳು ಏಕರೀತಿಯ ಅಭಿಮಾನದಿಂದ ಇದನ್ನು ಸ್ವಾಗತಿಸುವರೆಂದು ನಂಬಿದ್ದೇನೆ.

8-12-91

ನವರತ್ನ ನಾರಾಯಣಮೂರ್ತಿ
ಸಂಚಾಲಕರು

# ಶ್ರೀ ಗೋಪೀ ಗೀತ

**ಗೋಪ್ಯ ಊಚುಃ—**

**ಜಯತಿ ತೇಽಧಿಕಂ ಜನ್ಮನಾ ವ್ರಜಃ**
**ಶ್ರಯತ ಇಂದಿರಾ ಸಾಧು ತತ್ರ ಹಿ ।**
**ದಯಿತ ದೃಶ್ಯತಾಂ ತ್ವಾ ದಿದೃಕ್ಷತಾಂ**
**ತ್ವಯಿ ಧೃತಾಸವಸ್ತ್ವಾಂ ವಿಚಿನ್ವತೇ ॥ ॥ ೧ ॥**

ಬಿಂಬಾಧರದ ಗೋಪಿಯರು ತಮ್ಮ ಚಿತ್ತದಲ್ಲಿ ಪ್ರತಿಬಿಂಬಿತನಾದ ಗೋವಿಂದನನ್ನು ಕೂಗಿ ಕರೆದು ಹೀಗೆ ಹಾಡಿದರು – 'ಪ್ರಿಯಕರನಾದ ಕೃಷ್ಣನೇ, ನೀನು ಜನ್ಮ ತಳೆದುದರಿಂದ ಈ ನಂದಗೋಕುಲಕ್ಕೆ ಶ್ರೇಷ್ಠತೆ ಬಂದೊದಗಿತು. ನೀನು ಎಲ್ಲರಂತೆ ಕರ್ಮಾನುಸಾರವಾಗಿ ಜನ್ಮ ತಳೆಯಲಿಲ್ಲ – (ಜನ್ಮ ನ ಆವ್ರಜಃ) ಚತುರ್ಮುಖನು ಪ್ರಾರ್ಥಿಸುತ್ತಾ ನಿನ್ನ ಬಳಿ ಬಂದಾಗ–(ಅಧಿಕಂ) ಆ ಪ್ರಾರ್ಥನೆಯಂತೆ ಸ್ವೇಚ್ಛೆಯಿಂದ ಜನ್ಮ ತಳೆದೆ. ಆದ್ದರಿಂದಲೆ ಗೋಕುಲ ಶ್ರೇಷ್ಠವೆನಿಸಿತು. ಲಕ್ಷ್ಮಿಯೂ ಅಲ್ಲಿ ಚೆನ್ನಾಗಿ ವಾಸಮಾಡುತ್ತಿದ್ದಾಳೆ. ಅಲ್ಲಿಯ ಜನರು ನಿನ್ನನ್ನು ನೋಡಬಯಸುತ್ತಿದ್ದಾರೆ. ನೀನು ದರ್ಶನ ಕೊಡಬೇಕು. ಅವರು ನಿನಗಾಗಿ ಬದುಕಿದ್ದಾರೆ, ನಿನ್ನನ್ನೇ ಅರಸುತ್ತಿದ್ದಾರೆ.

(ಗೋಪಿಯರು ತಾವು ವಸ್ತುತಃ ದೇವತೆಗಳು ಎನ್ನುವುದನ್ನು ಸೂಚಿಸಲು ತಮ್ಮನ್ನೇ ಪರೋಕ್ಷವಾಗಿ 'ಅವರು' ಎಂದು ಮುಂತಾಗಿ ಪ್ರಥಮ ಪುರುಷದಲ್ಲಿಯೂ ಪುಲ್ಲಿಂಗದಲ್ಲಿಯೂ ನಿರ್ದೇಶಿಸುತ್ತಾರೆ. ಅಥವಾ ಮನ್ಮಥ ಪರವಶತೆಯಲ್ಲಿ ಈ ವ್ಯತ್ಯಾಸ ಅವರ ಗಮನಕ್ಕೆ ಬರಲಿಲ್ಲ. ಅಥವಾ ತಮ್ಮ ಬಂಧುಗಳಾದ ಪುರುಷರನ್ನು ಸೇರಿಸಿಕೊಂಡು ಸಾಮಾನ್ಯವಾಗಿ ಹೇಳಿರಬಹುದು ಅಥವಾ ಪ್ರಿಯತಮನನ್ನು ವಶಪಡಿಸಿಕೊಳ್ಳಲಾಗದ ತಾವು ಎಂಥ ಸ್ತ್ರೀಯರು ಎಂಬ ಅಭಿಪ್ರಾಯವೂ ಇರಬಹುದು.

ಜಯಶಾಲಿಯಾದ ಕೃಷ್ಣನೇ, ನಿನಗೆ ಎಲ್ಲರಂತೆ ಜನ್ಮವಿಲ್ಲ. ನೀನು ಸ್ವೇಚ್ಛೆಯಿಂದಲೇ ಬಂದೆ– (ಹೇ ಜ, ತೇ ಜನ್ಮ ನ, ಆವ್ರಜಃ) ನೀನೇನೂ ಯತಿಯೂ ಅಲ್ಲ– (ತೇ ಯತಿತಾ ನ) ಏಕೆಂದರೆ ಬ್ರಹ್ಮನಿಗೂ, ಮನ್ಮಥನಿಗೂ ತಾಯಿಯಾದ ಲಕ್ಷ್ಮಿಯಿಂದ

ಸುಖ ಪಡೆಯುವ ನಿನ್ನನ್ನು ಗೋಕುಲದ ಜನರು ನೋಡಬಯಸಿರುವರು - (ಇಧಿಕಂ) ನಮ್ಮಲ್ಲೂ ಲಕ್ಷ್ಮಿಯು ಆವೇಶವಿರುವುದರಿಂದ ನಮ್ಮನ್ನು ಕಾಪಾಡಬೇಕು. ನಮ್ಮನ್ನು ತಿರಸ್ಕರಿಸಲು ಕಾರಣವಿಲ್ಲ. – (ಹೇ ಇಂದಿರಾಸಾಧುತತ್ರ ! ಇಂದಿರಯಾ ಪ್ರವಿಷ್ಟ ಯಾಂತರಧುತೇನಾತಿರಸ್ಕೃತ್ಯಾ ಸಹಿತ ಇತೀಂದಿರಾಸಾಧುತೋಽಯಂ ಸ್ತ್ರೀಜನಃ ತಂ ತ್ರಾಯತ ಇತಿ ತತ್ಸಂಬೋಧನಂ) ನೀನು ಬಲು ಸುಂದರನೂ ಹೌದು - (ಭವಾನ್ ವೃಶ್ಯತಾಂ ಶ್ರಯತೇಹಿ) ಲಕ್ಷ್ಮೀದೇವಿಯೂ (ಇಂದಿರಾ), ಪ್ರಾಣಾಯಾಮ ಪರರಾದ ಯೋಗಿಗಳೂ - (ಧೃತಾಸವಃ, ಧೃತ+ಅಸವಃ) ಯಜ್ಞಪರರಾದ ನಂದಗೋಕುಲದ ಜನಸಮೂಹವೂ – (ಧೃತ+ಆ+ಸವಃ ಅವ್ರಜಃ) ನಿನ್ನನ್ನೇ ಹುಡುಕುತ್ತಿದ್ದಾರೆ.

(ಈ ಗೋಪೀಗೀತವು ನಗಣ ರಗಣ ರಗಣ ಲಘು ಗುರುಗಳಿಂದ ಕೂಡಿದ್ದು. ತ್ರಿಷ್ಟುಪ್ ಛಂದಸ್ಸಿನ ಹನ್ನೊಂದು ಅಕ್ಷರಗಳ ಯಾವುದೋ ಒಂದು ವೃತ್ತದಲ್ಲಿದೆ. ಹೆಸರು ಛಂದಃಶಾಸ್ತ್ರ ಗ್ರಂಥಗಳಲ್ಲಿ ಹೇಳಿಲ್ಲ. ಹರಿಮಹಿಮೆ ಅಜ್ಞೇಯವೆಂದೂ ಇದರಿಂದ ಧ್ವನಿತವಾಗುತ್ತದೆ. ರಗಣವು ಮಧ್ಯ ಲಘು ಉಳ್ಳದು. ಗೋಪಿಯರ ಮಧ್ಯವೂ ಲಘು. ರ ಎಂದರೆ ಅಗ್ನಿ. ಗೋಪಿಯರ ವಿರಹಾಗ್ನಿಗೆ ವ್ಯಂಜಕ. ಪ್ರತಿ ಪಾದದಲ್ಲೂ ಪ್ರಾರಂಭದಲ್ಲಿ ಲಘು. ಅಂತ್ಯದಲ್ಲಿ ಗುರು. ಕೃಷ್ಣನು ಗೋಪಿಯರ ಬಗ್ಗೆ ಪ್ರಾರಂಭದಲ್ಲಿ ಲಘು ಅಂದರೆ ತಿರಸ್ಕಾರ ದೃಷ್ಟಿಯಿಂದ ಮರೆಯಾದರೂ, ಕೊನೆಯಲ್ಲಿ ಪ್ರಸನ್ನನಾಗಿ ಗುರು ಅಂದರೆ ಆದರದ ಭಾವನೆಯಿಂದ ಮೈದೋರಿದ).

**ವ್ರಜಜನಾರ್ತಿಹನ್ ವೀರ ಯೋಷಿತಾಂ**
**ನಿಜಜನಸ್ಮಯಧ್ವಂಸನಸ್ಮಿತ ।**
**ಭಜ ಸಖೇ ಭವೇ ಕಿಂಕರೀಃ ಸ್ಮ ನೋ**
**ಜಲರುಹಾನನಂ ಚಾರುದರ್ಶಯನ್ ॥ ॥ ೨ ॥**

ಸಮರ್ಥ - (ವೀರ) ಗರುಡಾರೂಢ (ವಿ+ಈರ) ಇನ್ನೊಬ್ಬರ ಪ್ರೇರಣೆಗೊಳ ಪಡದ – (ವಿ+ಈರ) ಕೃಷ್ಣನೇ ! ಸ್ತ್ರೀಯರಾದ ನಮ್ಮ – (ಯೋಷಿತಾಂ) ದುಃಖ ಗಳನ್ನು ಕಳೆವವನೆ ! ವ್ರಜದಲ್ಲಿ ಜನಿಸಿದವನೆ ! – (ವ್ರಜ+ಜನ) ಜಗಜ್ಜನಕನೆ, ನಮ್ಮನ್ನು ಬಿಟ್ಟು ದೂರ ಹೋಗಬೇಡ – (ವ್ರಜ, ಜ, ನ) ನಿಮ್ಮವರೇ ಆದ ನಮ್ಮ ಗರ್ವಪರಿಹಾರ ಮಾಡಬಲ್ಲ ಮುಗುಳು ನಗು ಉಳ್ಳವನೆ, ಸ್ನೇಹಿತನೇ, ನಮ್ಮ ಒಳಿತಿ ಗಾಗಿ – (ಭವೇ) ಕಮಲದಂಥ ನಿನ್ನ ಮುಖವನ್ನು, ಕಮಲಕ್ಕೆ ಆದರ ಪ್ರವೃತ್ತಿ ಕೊಡುವ ಅಂದರೆ ಕಮಲವನ್ನು ಅರಳುವಂತೆ ಮಾಡುವ (ಜಲರುಹ+ಅನನ) ನಿನ್ನ ರೂಪವನ್ನು ತೋರುತ್ತ, ನಾವೆಲ್ಲ ನಿನ್ನ ದಾಸಿಯರೆಂಬುದನ್ನು ಮರೆಯದೆ ನಮ್ಮನ್ನು ಕಾಪಾಡು.

**ಶರದುದಾಶಯೆ ಸಾಧುಜಾತಸ-**
**ತ್ಸರಸಿಜೋದರಶ್ರೀಮುಷಾ ದೃಶಾ ।**
**ಸುರತನಾಥ ತೇ ಶುಲ್ಕದಾಸಿಕಾ**
**ವರದ ನಿಘ್ನತೋ ನೇಹ ಕಿಂ ವಧಃ ॥ ॥ ೩ ॥**

ಶರತ್ಕಾಲದ ಸರೋವರದಲ್ಲಿ ಚೆನ್ನಾಗಿ ಬೆಳೆದ ಕಮಲದಂತಿದೆ ನಿನ್ನ ಕಣ್ಣ ನೋಟ. ಅದನ್ನು ಮರೆ ಮಾಡುತ್ತ ನಮ್ಮನ್ನು ಸಾಯಿಸುವ ನಿನಗೆ ಸ್ತ್ರೀಹತ್ಯಾ ದೋಷ ಬಾರದೆ? ದುರ್ಜನರ ಕೆಂಗಣ್ಣ ದೃಷ್ಟಿಯು ಬಾಣದಂಥ ದುಷ್ಟ ಭಾವದಲ್ಲಿದ್ದು, ನೀನು ಅತ್ತ ದೂರದಲ್ಲಿ ಕ್ಷೀರಸಾಗರದ ಹೆಪ್ಪುಗಟ್ಟಿದ ನೀರಮೇಲೆ ಮಲಗಿದ್ದರೆ, ನಿನ್ನವರೆ ಆದ ನಮ್ಮನ್ನು ಅದು ಬಯಸುತ್ತದೆ.– (ಅಸಾಧು ಜಾತ ಸತ್ಸರಸಿಜೋದರ ಶ್ರೀಮುಷಾ ದೃಶಾ, ಹಲಂತತ್ವಾತ್ ಟಾ ಬಂತಃ ಶಬ್ದಃ,ಶರದುದಾಶಯೆ ಶರವದಾಚರ ತೀತಿ ಶರತ್ ಉದ್ಗತ ಆಶಯೋ ಯಸ್ಯ ತಸ್ಮಿನ್ ಸತಿ, ಶರತ್ ಮಂಡವದಾಚರತ್ ಉದಂ ಸಮುದ್ರೋದಕಂ ತತ್ರಾಶೇತೇ ಯಃ ಸ ತಸ್ಮಿನ್, ನಿಘ್ನತಃ ಅಧೀನಾಃ ಏತಾ ಮದ್ವಿಷಯಾ ಭವಂತ್ವಿತ್ಯಾಶಾಸ್ತೇ) ಇದರಿಂದ ನಮ್ಮನ್ನು ನೀನೆ ವಧಿಸಿದಂತಾಗುವು ದಿಲ್ಲವೆ ? ಹಿಂದೆ ವರ ಕೊಡುತ್ತಿದ್ದವನೆ ! (ವರಂ ದದಾತೀತಿ ವರದಃ) ಈಗ ನಮ್ಮ ಅಭಿಲಾಷೆಗಳನ್ನು ಹಾಳುಮಾಡುವವನೆ! (ವರಂ ದ್ಯತೀತಿ ವರದಃ) ಯಾವುದರ ಅಭಿಲಾಷೆಯೂ ಇಲ್ಲದವನೆ!– (ನೇಹ) ಉತ್ತಮ ಆನಂದ ಉಳ್ಳವನೆ!– (ಸುರತ) ಹೀಗೆ ನಮ್ಮನ್ನು ಕಾಡಿನಲ್ಲಿ ಬಿಟ್ಟಮೇಲೆ (ಅಥ) ನಿನಗೆ ನಮ್ಮನ್ನು ಕೊಂದ ದೋಷ ಬರಲಾರದೆ ? (ತೇ ಕಿಂ ವಧಃ ನ ?) ಸಜ್ಜನರ ರಕ್ಷಣೆಗಾಗಿ ಅವತರಿಸಿದವನೆ–(ಸಾಧು ಜಾತ) ಸಾಧುವಾದ ನಂದಗೋಪನ ಮಗನೆ–(ಸಾಧುಜಾತ) ನಿನ್ನ ತಂದೆ ಮಾತ್ರ ನಿನ್ನಂತೆ ಅಲ್ಲ. ಕಮಲವಾಸಿನಿಯಾದ ರಮೆಯನ್ನು ನಮ್ಮಲ್ಲಿ ಹಿಂದೆ ನೋಡುತ್ತಿದ್ದ ಆ ನಿನ್ನ ನೋಟವನ್ನು ಈಗ ಮರೆಮಾಡಿದರೆ– (ಸತ್‌ಸರಸಿಜೋದರ ಶ್ರೀಮುಷಾ ದೃಶಾ) ಹಿಂದೆ ನಮಗೆ ದಂತಕ್ಷತ ಉಂಟುಮಾಡುತ್ತಿದ್ದ ನಿನಗೆ– (ರದನಿಘ್ನತಃ ತೇ) ಇದು ವಧೆಯಂತೆಯೆ ಅಲ್ಲವೆ?–(ವಧಃ ವ ಕಿಂ ನ ?)

**ವಿಷಜಲಾಶಯಾದ್ ವ್ಯಾಲರಾಕ್ಷಸಾದ**
**ವರ್ಷಮಾರುತಾದ್ ವೈದ್ಯುತಾನಲಾತ್ ।**
**ವೃಷಮಯಾದ್ ಭಯಾದ್ ವಿಶ್ವತೋಮುಖಾದ್**
**ವೃಷಭ ತೇ ವಯಂ ರಕ್ಷಿತಾ ಮುಹುಃ ॥ ॥ ೪ ॥**

ಪುರುಷೋತ್ತಮ– (ವೃಷಭ !) ಎತ್ತಿನ ರೂಪಧರಿಸಿದ ಇಂದ್ರನಿಗೂ ವಾಯು ವಿಗೂ ಸುಖ ನೀಡುವವನೆ– (ವೃಷಭ+ತೇ!) ವಿಷಮಯವಾದ ಯಮುನೆಯು

ಮಡುವಿನಿಂದಲೂ, ಕ್ರೂರ ರಾಕ್ಷಸನಾದ ತೃಣಾವರ್ತನಿಂದಲೂ, ವಿಷವನ್ನು ಯಮುನೆಯ ಮಡುವಿನಲ್ಲಿ ತುಂಬಿದ ಕಾಲಿಯಸರ್ಪ ಮತ್ತು ಬಕಾಸುರರಿಂದಲೂ, ಮಳೆ ಗಾಳಿಗಳಿಂದಲೂ, ಸಿಡಿಲಿನ ಬೆಂಕಿಯಿಂದಲೂ, ವತ್ಸಾಸುರ ಮತ್ತು ಮಯಪುತ್ರ ವ್ಯೋಮಾಸುರರ ಭಯದಿಂದಲೂ, ಎಲ್ಲೆಡೆ ಹಬ್ಬಿದ ಕಾಳ್ಗಿಚ್ಚಿನಿಂದಲೂ, ಬಾರಿ ಬಾರಿಗೂ ನಾವು ನಿನ್ನಿಂದ ರಕ್ಷಿತರಾದವರು. ಆದ್ದರಿಂದ ಈಗಲೂ ನೀನು ನಮ್ಮನ್ನು ರಕ್ಷಿಸಬೇಕು.

**ನ ಖಲು ಗೋಪಿಕಾನಂದನೋ ಭವಾನ್**
**ಅಖಿಲದೇಹಿನಾಮಂತರಾತ್ಮದೃಕ್ ।**
**ವಿಖನಸಾರ್ಥಿತೋ ವಿಶ್ವಗುಪ್ತಯೇ**
**ಸಖ ಉದೇಯಿವಾನ್ ಸಾತ್ವತಾಂ ಕುಲೇ ॥ ॥ ೫ ॥**

ಸಖನೆ, ನೀನು ಗೋಪಿಯ ಮಗನಲ್ಲ. ಗೋಪಿಯರಿಗೆ ಈಗ ಆನಂದ ಕೊಡು ತ್ತಲೂ ಇಲ್ಲ. ಎಲ್ಲ ದೇಹಿಗಳ ಅಂತರಾತ್ಮನಾಗಿ ನೋಡುತ್ತಿರುವವ ನೀನು, ಬ್ರಹ್ಮ ನಿಂದ ಪ್ರಾರ್ಥಿತನಾಗಿ ಜಗದ್ರಕ್ಷಣೆಗಾಗಿ ಯಾದವ ಕುಲದಲ್ಲಿ ಉದಿಸಿದವನು, ಗೋಪಿಯ ಮಗನೆನಿಸಿದ ನೀನೆ. 'ನನ್ನನ್ನು ಕಂಡ ಜ್ಞಾನಿಯೆ, ನೀನು ಸಂಸಾರವನ್ನು ದಾಟು' – (ಹೇ ಆತ್ಮದೃಕ್ ! ತ್ವಂ ಭವಾನ್ ತರ) ಎನ್ನುತ್ತ ಜಗತ್ತನ್ನೇ ರಕ್ಷಿಸುವುದಕ್ಕಾಗಿ ನೀನು ಯಾದವ ಕುಲದಲ್ಲಿ ಉದಿಸಿದಿ.

**ವಿರಚಿತಾಭಯಂ ವೃಷ್ಣಿವರ್ಯ ತೇ**
**ಶರಣಮೀಯುಷಾಂ ಸಂಸೃತೇರ್ಭಯಾತ್ ।**
**ಕರಸರೋರುಹಂ ಕಾಂತ ಕಾಮದಂ**
**ಶಿರಸಿ ಧೇಹಿ ನಃ ಶ್ರೀಕರಗ್ರಹಮ್ ॥ ॥ ೬ ॥**

ಯದುಶ್ರೇಷ್ಠನೆ, ಮನೋಹರನೆ, ಪತಿಯೆ, ನಿನ್ನ ಒಡನಾಟವೆಂಬ ಸಂಸಾರವನ್ನು ಹೊಂದುವ ಉದ್ದೇಶದಿಂದಲೂ, ಇತರ ಭಯದಿಂದಲೂ ನಿನ್ನನ್ನು ಶರಣು ಹೊಂದಿದ ವರಿಗೆ ನಿನ್ನ ಕರಕಮಲವು ಅಭಯ ನೀಡುತ್ತದೆ; ಅಭೀಷ್ಟಗಳನ್ನು ಪೂರೈಸುತ್ತದೆ, ಕಾಮವನ್ನು ಅಳಿಸುತ್ತದೆ. ಶ್ರೀದೇವಿಯ ಪಾಣಿಗ್ರಹಣ ಮಾಡಿದ ಅದು ಹಿಂದೆ ನಮಗೆ ಸಂಪತ್ಕರವಾಗಿತ್ತು, ಈಗ ವಿಷಕರವಾಗಿದೆ. (ಶ್ರೀ = ಶ್ರೀದೇವಿ, ಸಂಪತ್ತು, ವಿಷ) ಅದನ್ನು ನಮ್ಮ ತಲೆಯ ಮೇಲಿಡು.

**ಪ್ರಣತದೇಹಿನಾಂ ಪಾಪಕರ್ಶನಂ**
**ತೃಣಚರಾನುಗಂ ಶ್ರೀನಿಕೇತನಮ್ ।**
**ಫಣಿಫಣಾರ್ಪಿತಂ ತೇ ಪದಾಂಬುಜಂ**
**ಕೃಣು ಕುಚೇಷು ನಃ ಕೃಂಧಿ ಹೃಚ್ಛಯಮ್ ॥ ೭ ॥**

ಹಿಂದೆ ನಿನ್ನ ಪಾದಕಮಲವು ನಮಸ್ಕಾರ ಮಾಡಿದವರ ಪಾಪ ಪರಿಹರಿಸುತ್ತಿತ್ತು. ಹುಲ್ಲು ಮೇಯುವ ಪಶುಗಳ ಹಿಂದೆಹಿಂದೆ ಓಡಾಡುತ್ತಿತ್ತು. ಶೋಭೆಗೂ ಲಕ್ಷ್ಮಿಗೂ ಆವಾಸಸ್ಥಾನವಾಗಿತ್ತು. ಶೇಷನಾಗ ಹಾಗೂ ಕಾಳಿಯ ನಾಗರ ಹೆಡೆಯನ್ನು ತುಳಿದಿತ್ತು. ಅದನ್ನು ಈಗ ನಮ್ಮ ಸ್ತನಗಳ ಮೇಲಿರಿಸು, ಹಾವಿನ ಹೆಡೆಯೂ ನಮ್ಮ ಸ್ತನಗಳೂ ಅಸಂಗನಾದ ನಿನಗೆ ಸಮಾನವೆ. ಆದರೆ ಪೊರೆ ಬಿಡುವ ಸ್ವಭಾವದ ಹಾವಿನ ಸಂಗವಿರುವುದರಿಂದ ನಮ್ಮ ಸ್ತನವಸ್ತ್ರಗಳನ್ನು ತೆಗೆದು ನಮ್ಮ ಕಾಮಬಾಧೆಯನ್ನು ನೀನು ಪರಿಹರಿಸಬೇಕು. ನಮ್ಮ ಸ್ತನಗಳಿಗೆ ಹೂಬಾಣ ಎಸೆಯುವ ಅಪರಾಧ ಮಾಡಿರುವ ಮನ್ಮಥನನ್ನು ನೀನು ಭಂಗಪಡಿಸಬೇಕು. (ಯಃ ನಃ ಕುಚೇಷುನಃ ತಂ ಹೃಚ್ಛಯಂ ಕೃಂಧಿ)

**ಮಧುರಯಾ ಗಿರಾ ವಲ್ಗುವಾಕ್ಯಯಾ**
**ಬುಧಮನೋಜ್ಞಯಾ ಪುಷ್ಕರೇಕ್ಷಣ ।**
**ವಿಧಿಕರೀರಿಮಾ ವೀರ ಮುಹ್ಯತೀ-**
**ರಧರಸೀಧುನಾऽऽಪ್ಯಾಯಯಸ್ವ ನಃ ॥ ೮ ॥**

ಕಮಲದಂಥ ಕಣ್ಣುಳ್ಳವನೆ, ವಿಶಾಲ ಕಣ್ಣುಳ್ಳವನೆ, ಸಾವಿರ ಕಣ್ಣುಳ್ಳವನೆ, ತುಂಬ ಜ್ಞಾನ ಉಳ್ಳವನೆ (ಪುಷ್ಕರ–ಕಮಲ, ಪುಷ್ಕಳ. ಈಕ್ಷಣ–ಕಣ್ಣು, ಜ್ಞಾನ), ವೀರನೆ, ನಿನ್ನ ಮಾತು ಮಧುರ. ಅದರಲ್ಲಿ ಪ್ರತಿವಾಕ್ಯವೂ ಮನೋಹರ. ನಮಗೆ ಮಾತ್ರವಲ್ಲ, ವಿದ್ವಾಂಸರಿಗೂ ಮನೋಜ್ಞವಾದುದು. ಆದರಿಂದ ನಾವು ನಿನ್ನ ದಾಸಿಯರಾದೆವು. ನಿನ್ನನ್ನು ಮೋಹಿಸಿದೆವು. ನಿನ್ನ ಅಧರರಸದ ಮದ್ಯದಿಂದ ನಮ್ಮನ್ನು ಆಪ್ಯಾಯನಗೊಳಿಸು. ಎಲೆ, ಮುರಲಿಯೆ, ಬ್ರಹ್ಮಾಂಡದ ಅಧಿಷ್ಠಾತ್ರಿಯಾದ ಮಹಾಲಕ್ಷ್ಮಿಯೆ ಸರ್ವಸ್ವವಾಗಿ ಉಳ್ಳ ನೀನು (ವಿಧಿ ಕರೀರಿ ಮಾ) ನಿನ್ನ ದನಿಯಿಂದ ನಮ್ಮನ್ನು ಆಪ್ಯಾಯನಗೊಳಿಸು (ಆಪ್ಯಾಯ, ಯಃ ಸ್ವನಃ ತೇನ).

**ತವ ಕಥಾಮೃತಂ ತಪ್ತಜೀವನಂ**
**ಕವಿಭಿರೀಡಿತಂ ಕಲ್ಮಷಾಪಹಮ್ ।**
**ಶ್ರವಣಮಂಗಲಂ ಶ್ರೀಮದಾತತಂ**
**ಭುವಿ ಗೃಣಂತಿ ತೇ ಭೂರಿದಾ ಜನಾಃ ॥ ೯ ॥**

ಸಕಲ ಪುರುಷಾರ್ಥಪ್ರದನೆ, – (ಭೂರಿದ!) ಸಂಸಾರತಾಪದಿಂದ ಬೇಯು ವವರನ್ನು ಚೇತರಿಸಿಕೊಳ್ಳುವಂತೆ ಮಾಡುವಂಥ, ಕವಿಗಳು ಹಾಡುವಂಥ, ಪಾಪ-ಪರಿಹಾರಕವಾದ, ಶ್ರವಣ ಮಾಡಿದರೆ ಮಂಗಳ ಉಂಟುಮಾಡುವ, ಸಮೃದ್ಧಿಯಾಗಿ ಲೋಕವಲ್ಲೆಲ್ಲ ಹರಡಿದ ನಿನ್ನ ಕಥಾಮೃತವನ್ನು ಹೊಗಳುವವರು ಮಹಾತ್ಮರು, ಅಥವಾ ಜೀವನ್ಮುಕ್ತರು (ಅಜನಾಃ) ಅಂಥ ನಿನ್ನ ಕಥಾಮೃತವನ್ನು ಪಾನ ಮಾಡುತ್ತಿರುವುದರಿಂದಲೆ ನಾವಿನ್ನೂ ಬದುಕಿದ್ದೇವೆ ಎಂದು ತಿಳಿ.

**ಪ್ರಹಸಿತಂ ಪ್ರಿಯ ಪ್ರೇಮವೀಕ್ಷಣಂ**
**ವಿಹರಣಂ ಚ ತೇ ಧ್ಯಾನಮಂಗಲಮ್ ।**
**ರಹಸಿ ಸಂವಿದೋ ಯಾ ಹೃದಿಸ್ಪೃಶಃ**
**ಕುಹಕ ನೋ ಮನಃ ಕ್ಷೋಭಯಂತಿ ಹಿ ॥ ೧೦ ॥**

ಪ್ರಿಯ, ಧೂರ್ತ, (ಕುಹಕ - ಪ್ರಣಯಕೋಪದ ಮಾತು. ವಸ್ತುತಃ ನೋ ಕುಹಕ ! ಮೋಸ ಮಾಡದವನೆ !) ನೆನೆದ ಮಾತ್ರಕ್ಕೆ ಮಂಗಳ ಉಂಟು ಮಾಡುವ ನಿನ್ನ ನಗು, ಪ್ರೇಮದ ನೋಟ, ವಿಹಾರ, ಹೃದಯಸ್ಪರ್ಶಿಯಾದ ರಹಸ್ಯ ಮಾತುಗಳು ಇವೆಲ್ಲ ನಮ್ಮ ಮನಸ್ಸನ್ನು ಕ್ಷೋಭೆಗೊಳಿಸುತ್ತವೆ. ಆದ್ದರಿಂದ ನೀನು ಅಧರಾಮೃತದಿಂದ ನಮ್ಮನ್ನು ಆಪ್ಯಾಯನಗೊಳಿಸಬೇಕು.

**ಚಲಸಿ ಯದ್ ವ್ರಜಾಚ್ಚಾರಯನ್ ಪಶೂನ್**
**ನಲಿನಸುಂದರಂ ನಾಥ ತೇ ಪದಮ್ ।**
**ತೃಣಶಿಲಾಂಕುರೈಃ ಸೀದತೀತಿ ನಃ**
**ಕಲಿಲತಾಂ ಮನಃ ಕಾಂತ ಗಚ್ಛತಿ ॥ ೧೧ ॥**

ನಾಥ, ನೀನು ಭಗವಂತನೆಂದು ನಾವು ಅರಿತಿದ್ದರೂ ಪ್ರೇಮದಿಂದ ಹುಚ್ಚಾದ ನಮ್ಮ ಮನಸ್ಸು ಕ್ಷೋಭೆ ಹೊಂದುತ್ತಿದೆ. ಏಕೆಂದರೆ ಧೂರ್ತನಲ್ಲದಿದ್ದರೂ ನೀನು ಹಾಗೇ ನಟಿಸುವಿ. ಗೋಕುಲದಿಂದ ನೀನು ಆಕಳು ಮೇಯಿಸುತ್ತಾ ಹೋಗುವಾಗ ಕಮಲದಂಥ ನಿನ್ನ ಸುಂದರ ಕೋಮಲಪಾದವು ಹುಲ್ಲು ಕಲ್ಲುಚೂರುಗಳಿಂದ ಗಾಯಗೊಂಡೀತೆಂದು ನಮ್ಮ ಮನಸ್ಸು ಕಳವಳಗೊಳ್ಳುತ್ತದೆ. ನನಗೂ ನಿಮಗೂ ಏನು ಸಂಬಂಧ ಎನ್ನುವಿಯಾ? ಕಾಂತ, ನೀನು ನಮ್ಮ ಪತಿಯಾಗಿರುವಿ, ನಾನೇನು ನಿಮಗೆ ದುಃಖ ಉಂಟುಮಾಡಿದೆ ಎನ್ನುವಿಯಾ? ಪಶುಗಳಂತೆ ನಮ್ಮನ್ನು ಕಾಡಿಂದ ಕಾಡಿಗೆ ನಡೆಸಿ ಈಗ ನಮ್ಮ ಗುಂಪಿನಿಂದ ದೂರ ಹೋಗುವಿ ! ನಮ್ಮ ಸುಖವನ್ನು ಹಾಳುಮಾಡುವವನೆ! —(ಕ + ಅಂತ) ಇದು ನನ್ನ ಸ್ವಭಾವವಲ್ಲವೆ ಅನ್ನಬೇಡ. ಎಲ್ಲರಿಗೂ ಸ್ವರೂಪಸುಖ ಕೊಡುವವನು ನೀನು — (ಕ+ಅಂತ)

ಕಲ್ಲಿನಂಥ ಮನಸ್ಸಿನವನೆ! (ಮನಃಕಾಂತ!) ನೀನು ಹೊರಟುಹೋದೆ ಎಂದು ನಮ್ಮ ಗುಂಪು ಖೇದಗೊಂಡಿದೆ. ನಾವು ಇಷ್ಟರಿಂದಲೆ ಸುಮ್ಮನಾಗುವೆವೆಂದುಕೊಳ್ಳಬೇಡ. ನಮ್ಮ ಮನಸ್ಸು ಕಲಿವೃಕ್ಷ ಮಾಧವೀಲತೆಗಳನ್ನು (ಕಲಿಲತಾಂ) ನಿನ್ನ ಅನ್ವೇಷಣೆಗಾಗಿ ಆಶ್ರಯಿಸುತ್ತಿದೆ. ಮನೋಹರ ! — (ಮನಃಕಾಂತ) ನೀನು ಗೋಕುಲದಿಂದ ಹಸುಗಳನ್ನು ಮೇಯಿಸುತ್ತ ಹೊರಟಾಗಲೂ ನಿನ್ನ ಪಾದ ಕಮಲದಂತೆಯೇ ಸುಂದರವಾಗಿಯೇ ಇರುತ್ತದೆ ! ನಮ್ಮ ಪಾದಗಳು ಮಾತ್ರ ಹುಲ್ಲು ಕಲ್ಲುಚೂರುಗಳಿಂದ ಗಾಯಗೊಳ್ಳುತ್ತವೆ. ಆದರೂ ನೀನು ಕಳವಳ ಹೊಂದುವುದಿಲ್ಲ. ಆದ್ದರಿಂದಲೆ ನೀನು ಧೂರ್ತ. ನಿನ್ನೊಡನೆ ನಮ್ಮ ಮನಸ್ಸು ಕಲಹವಾಡಬಯಸುತ್ತದೆ. (ಕಲಿಲತಾಂ ಗಚ್ಛತಿ). ಅದಕ್ಕಾಗಿಯೇ ನನ್ನ ಮನಸ್ಸು ನಿನ್ನ ಪಾದವನ್ನು ಅರಸುತ್ತಿದೆ. (ಮಮ ಮನಃ ತೇ ಪದಂ ನಾಥತೇ).

(ಇಲ್ಲಿ ಅನುಪ್ರಾಸ ಬೇಕೆಂಬ ಆಗ್ರಹವಿರುವುದಾದರೆ 'ಶಿಲ ತೃಣಾಂಕುರೈಃ' ಎಂದು ಪಾಠವಿಟ್ಟುಕೊಳ್ಳಬಹುದು. ಶಿಲೆಯಿಂದ ಸಹಿತವಾದ ತೃಣಾಂಕುರ ಎಂದರ್ಥ).

**ದಿನಪರಿಕ್ಷಯೇ ನೀಲಕುಂತಲೈ-**
**ರ್ವನರುಹಾನನಂ ಬಿಭ್ರದಾವೃತಮ್ ।**
**ವನರಜಸ್ವಲಂ ದರ್ಶಯನ್ ಮುಹು-**
**ರ್ಮನಸಿ ನಃ ಸ್ಮರಂ ವೀರ ಯಚ್ಛಸಿ** ॥ ೧೨ ॥

ವೀರನೆ, ಸಾಯಂಕಾಲ ನೀನು ಕಾಡಿನಿಂದ ಬರುವಾಗ ಅಲ್ಲಿಯ ಗೋಧೂಳಿಯಿಂದ ಮುಚ್ಚಿದ ಕಪ್ಪು ಮುಂಗುರುಳ ಮುಖಕಮಲ ಹೊತ್ತು ನಮಗೆ ತೋರುವಿ. ಅದನ್ನು ನೆನೆದಾಗಲೆಲ್ಲ ನಮ್ಮ ಮನಸ್ಸಿನಲ್ಲಿ ಕಾಮಬಾಧೆ ಉಂಟಾಗುತ್ತದೆ. ನಿನ್ನ ಮುಂಗುರುಳಿಗೆ 'ಕುಂತಲ' ಎಂಬ ಹೆಸರು ಸರಿಯಾಗಿದೆ. ಏಕೆಂದರೆ ಅವು ಈ ವಿರಹಕಾಲದಲ್ಲಿ ನಮಗೆ ಕುಂತಾಯುಧ ಹಿಡಿದ ಕ್ರೂರಜನರಂತೆ ಕಾಣುತ್ತವೆ.

**ಪ್ರಣತಕಾಮದಂ ಪದ್ಮಜಾರ್ಚಿತಂ**
**ಧರಣಿಮಂಡನಂ ಧ್ಯೇಯಮಾಪದಿ ।**
**ಚರಣಪಂಕಜಂ ಶಂತಮಂ ಚ ತೇ**
**ರಮಣ ನಃ ಸ್ತನೇಷ್ವರ್ಪಯಾಧಿಹನ್** ॥ ೧೩ ॥

ಮನಸ್ಸಿನ ದುಃಖ ಕಳೆವವನೆ, ಪ್ರಿಯಕರನೆ, ಬ್ರಹ್ಮನಿಂದ ಪೂಜಿತವೂ, ಭೂಮಿಗೆ ಅಲಂಕಾರವೂ, ಸ್ಪಷ್ಟವಾಗಿ ಧೂಳಿನಲ್ಲಿ ಮೂಡಿದ ಹೆಜ್ಜೆಗಳನ್ನು ಕಂಡಾಗ

ನಮ್ಮ ಧ್ಯಾನಕ್ಕೆ ಗೋಚರವೂ (ಆ ಪದಿ ಧ್ಯೇಯಂ) ಆನಂದಮಯವೂ ಆದ ನಿನ್ನ ಪಾದಕಮಲವನ್ನು ನಮ್ಮ ಸ್ತನಗಳಲ್ಲಿ ಇಡು.

(ಈ ಬೇಡಿಕೆ ಹಿಂದೊಮ್ಮೆ ಬಂದಿದೆ. ಆದರೆ ಅದು ಒಬ್ಬಳದು, ಇದು ಇನ್ನೊಬ್ಬಳದು. ಅಥವಾ ಒಬ್ಬಳೆ ಆದರದಿಂದ ಎರಡು ಬಾರಿ ಬೇಡಿದ್ದಾಳೆ. ಅಥವಾ ಹಿಂದೆ ಜ್ಞಾನಮಯವೆಂದೂ ಈಗ ಆನಂದಮಯವೆಂದೂ ಪಾದವನ್ನು ಹೊಗಳಿದೆ. ಅಥವಾ ಸ್ತನ ಎಂದರೆ ಶಬ್ದ. ನಿನ್ನ ಪಾದವನ್ನು ನಮ್ಮ ಶಬ್ದಗಳಲ್ಲಿಡು ಅಂದರೆ ನಮ್ಮ ಮಾತೆಲ್ಲ ನಿನ್ನ ಸ್ತುತಿಯಾಗುವಂತೆ ಮಾಡೆಂದು ಬೇಡುತ್ತಿದ್ದಾಳೆ.)

**ಸುರತವರ್ಧನಂ ಶೋಕನಾಶನಂ**
**ಸ್ವರಿತವೇಣುನಾ ಸುಷ್ಠು ಚುಂಬಿತಮ್ ।**
**ಇತರರಾಗವಿಸ್ಮಾರಣಂ ನೃಣಾಂ**
**ವಿತರ ವೀರ ನಸ್ತೇऽಧರಾಮೃತಮ್ ॥ ೧೪ ॥**

ವೀರ, ನಿನ್ನ ಅಧರಾಮೃತವನ್ನು ನಮಗೆ ನೀಡು. ಅದು ಸುರತಕ್ರೀಡೆಯನ್ನು ಹೆಚ್ಚಿಸುವುದು. ಶೋಕವನ್ನು ಕಳೆಯುವುದು. ಧ್ವನಿಮಾಡುವ ಕೊಳಲು ಅದನ್ನು ಚೆನ್ನಾಗಿ ಚುಂಬಿಸುವುದು. ನೋಡುವ ಮನುಷ್ಯರಿಗೆ ಅವರ ಬೇರೆ ಎಲ್ಲ ಅಭಿಲಾಷೆಗಳನ್ನು ಮರೆಸುವುದು. ನೋಡುವವರಿಗೇ ಹೀಗೆಂದಮೇಲೆ ಅನುಭವಿಸುವವರಿಗೆ ?

**ಅಟತಿ ಯದ್ಭವಾನಹ್ನಿ ಕಾನನಂ**
**ತ್ರುಟಿಯುಗಾಯತೇ ತ್ವಾಮಪಶ್ಯತಾಮ್ ।**
**ಕುಟಿಲಕುಂತಲಂ ಶ್ರೀಮುಖಂ ಚ ತೇ**
**ಜಡವದೀಕ್ಷತಾಂ ಪಕ್ಷ್ಮಕೃದ್ದೃಶಾಮ್ ॥ ೧೫ ॥**

ನೀನು ಹಗಲಲ್ಲಿ ಕಾಡಿನಲ್ಲಿ ಸಂಚರಿಸುತ್ತಿದ್ದರೆ ನಮಗೆ ನಿನ್ನನ್ನು ಕಾಣದೆ ಕ್ಷಣವೂ ಯುಗವಾಗುತ್ತದೆ. ನಿನ್ನ ವಕ್ರವಾದ ಮುಂಗುರುಳು ಮತ್ತು ಸುಂದರ ಮುಖ ಕಾಣಿಸಿಕೊಂಡೊಡನೆ ಎವೆಯಿಕ್ಕದೆ ನೋಡುವ ನಮ್ಮ ಕಣ್ಣು ಜಡವಸ್ತುವಿನಂತೆ ನಿಶ್ಚಲವಾಗುತ್ತದೆ. ರೆಪ್ಪೆಗಳಿಗೆ ನೋವಾಗುತ್ತದೆ. (ಪಕ್ಷ್ಮಕೃತ್ ಎಂಬ ಪಾಠದಲ್ಲಿ ಎವೆಯಿಕ್ಕಲೊಲ್ಲದ ನಮ್ಮ ಕಣ್ಣಿಗೆ ರೆಪ್ಪೆಗಳನ್ನು ಮೂರ್ಖನಂತೆ ಬ್ರಹ್ಮನೇಕೆ ಸೃಷ್ಟಿಸಿದನೊ ಎಂದೆನಿಸುತ್ತದೆ ಎಂದರ್ಥ.) ನೀನು ಹಗಲಲ್ಲಿ ಸಂಚರಿಸುವಾಗ ನಾಯಕನಾದ ನಿನ್ನನ್ನು ಯಾವ ಹೆಣ್ಣು ಹಿಂಬಾಲಿಸದಿರುತ್ತಾಳೆ ? (ಯದ್ ಭವಾನ್ ಅಹ್ನಿ ಅಟತಿ ತದಾ ನಂ ತ್ವಾ ಕಾ ನ ಅಮ?) ಯಾವ ಹೆಣ್ಣು ನಿನ್ನನ್ನು ಹಿಂಬಾಲಿಸದೆ ಒಂದು ಕ್ಷಣವನ್ನು ಯುಗದಂತೆ ಕಳೆಯುತ್ತ ಬದುಕಿರುತ್ತಾಳೆ ? (ಯಾ ತ್ರುಟಿಯುಗಾ ಪಶ್ಯತಾಂ ಅಯತೇ ಸಾ ಕಾ ಇತಿ ಪಶ್ಯ) ನಿನ್ನನ್ನು

ನೋಡುವವರ ಕಣ್ಣುಗಳಿಗೆ ಯುಗವೇ ಎರಡು ಕ್ಷಣದಂತಾಗುತ್ತದೆ. ಪಂಡಿತರಿಗಾಗುವಂತೆ. (ಈಕ್ಷತಾಂ ದೃಶಾಂ ಯುಗಂ ಅಜಡವತ್ ತ್ರುಟಿಯುಗಾಯತೇ.)

(ಈಗ 'ತ್ರುಟಿಯುಗಾಯತೇ' ಎಂಬಲ್ಲಿ 'ತ್ರುಟಿ' ಶಬ್ದದ ವಿಭಕ್ತಿಲೋಪ ಹೇಳಬೇಕಾಗಿಲ್ಲ. 'ತ್ರುಟಿಯುರ್ಗಾಯತೇ' ಎಂದು ಛಂದೋಭಂಗವೂ ಬೇಕಾಗಿಲ್ಲ. ತ್ರುಟಿ ಶಬ್ದವನ್ನು ನಪುಂಸಕಲಿಂಗದಲ್ಲಿಟ್ಟುಕೊಂಡರೆ ಹಿಂದಿನ ಅರ್ಥದಲ್ಲಿಯೂ ಯಾವ ತೊಂದರೆ ಇಲ್ಲ.)

**ಪತಿಸುತಾನ್ವಯಭ್ರಾತೃಬಾಂಧವಾನೌ-**<br>
**ಅತಿವಿಲಂಘ್ಯ ತೇ ಹ್ಯಚ್ಯುತಾಗತಾಃ ।**<br>
**ಗತಿವಿದಸ್ತವೋದ್ಗೀತಮೋಹಿತಾಃ**<br>
**ಕಿತವ ಯೋಷಿತಃ ಕಸ್ತ್ಯಜೇನ್ನಿಶಿ** ॥ ೧೬ ॥

ವಂಚಕ, ಅಚ್ಯುತ ನಿನ್ನನ್ನು ನಂಬಿ ಪತಿ ಸುತರು ಸೋದರರು ಬಂಧುಬಾಂಧವರನ್ನೆಲ್ಲ ಬಿಟ್ಟು ಬಂದಿದ್ದೇವೆ. ನಮ್ಮನ್ನು ಮರುಳು ಮಾಡುವ ಬಗೆಯನ್ನು ಬಲ್ಲ ನಿನ್ನ ಉತ್ತಮ ಗಾನವನ್ನು ಕೇಳಿ ಮೋಹಿತರಾಗಿ ಬಂದೆವು. ರಾತ್ರಿಯಲ್ಲಿ ಸ್ತ್ರೀಯರನ್ನು ಹೀಗೆ ನಿನ್ನಂತೆ ಇನ್ನಾರು ಬಿಟ್ಟುಹೋದಾರು ?

**ರಹಸಿ ಸಂವಿದಂ ಹೃಚ್ಛಯೋದಯಂ**<br>
**ಪ್ರಹಸಿತಾನನಂ ಪ್ರೇಮವೀಕ್ಷಣಮ್ ।**<br>
**ಬೃಹದುರಃ ಶ್ರಿಯೋ ಧಾಮ ವೀಕ್ಷ್ಯ ತೇ**<br>
**ಮುಹುರತಿಸ್ಪೃಹಾ ಮುಹ್ಯತೇ ಮನಃ** ॥ ೧೭ ॥

ನಿನ್ನ ರಹಸ್ಯಮಾತುಗಳನ್ನು ಕೇಳಿ, ಬಯಕೆಯನ್ನು ಹೆಚ್ಚಿಸುವ ನಿನ್ನ ನಗುಮೊಗವನ್ನೂ ಪ್ರೇಮದ ನೋಟವನ್ನೂ ಲಕ್ಷ್ಮೀದೇವಿಯ ಮನೆ ಎನಿಸಿರುವ ನಿನ್ನ ವಿಶಾಲ ಎದೆಯನ್ನೂ ನೋಡಿ ನಮ್ಮ ಮನಸ್ಸು ತಡೆಯಲಾಗದ ಬಯಕೆಯಿಂದ ಹುಚ್ಚಾಗುತ್ತಿದೆ. ಯಾವ ಬಯಕೆಯೂ ಇಲ್ಲದವನೇ – (ಅತಿಸ್ಪೃಹ!) ನಮ್ಮ ಮನಸ್ಸು ಬಹಳ ಹುಚ್ಚಾಗುತ್ತಿದೆ—(ಮನಃ ಆಮುಹ್ಯತೇ). ('ಬೃಹದುರಃಶ್ರಿಯೋವೀರ ವೀಕ್ಷ್ಯ ತೇ' ಎಂಬ ಪಾಠದಲ್ಲಿ 'ವಿಶಾಲವಾದ ಎದೆಯಲ್ಲಿರುವ ಶ್ರೀದೇವಿಯವರನ್ನು ನೋಡಿ' ಎನ್ನುವಾಗ ಶ್ರೀದೇವಿ ಒಬ್ಬಳೆ ಆಗಿದ್ದರೂ ಸವತಿಯರ ಕಣ್ಣಿಗೆ ಅನೇಕಳಾಗಿ ಕಾಣಬಹುದು.)

**ವ್ರಜವನೌಕಸಾಂ ವ್ಯಕ್ತಿರಂಗ ತೇ**
**ವೃಜಿನಹಂತ್ರ್ಯಲಂ ವಿಶ್ವಮಂಗಲಂ ।**
**ಭಜ ಮನಾಕ್ಚ ನಸ್ತ್ವತ್ಸ್ಪೃಹಾತ್ಮನಾಂ**
**ಸ್ವಜನಹೃದ್ರುಜಾಂ ಯನ್ನಿಷೂದನಮ್ ॥ ೧೮ ॥**

ಬಾಂಧವನಾದ ಕೃಷ್ಣನೆ, ಗೋಕುಲವಾಸಿಗಳಿಗೂ ವನವಾಸಿಗಳಿಗೂ ನಿನ್ನ ಅವತಾರವು ಪಾಪಪರಿಹಾರಕ. ನಿನ್ನನ್ನು ಪ್ರೀತಿಸಿರುವ ನಮ್ಮ ಮನಸ್ಸಿನ ದುಃಖಗಳನ್ನು ಪರಿಹರಿಸಬಲ್ಲ ಮತ್ತು ಲೋಕಕ್ಕೇ ಮಂಗಳಕರವಾದ ನಿನ್ನ ರೂಪವನ್ನು ಸ್ವಲ್ಪವಾದರೂ ತೋರು.

**ಶ್ರೀ ಶುಕ ಉವಾಚ—**

**ಇತಿ ಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚ ಚಿತ್ರಧಾ ।**
**ರುರುದುಃ ಸುಸ್ವರಂ ರಾಜನ್ ಕೃಷ್ಣದರ್ಶನಲಾಲಸಾಃ ॥**
**ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ ।**
**ಪೀತಾಂಬರಧರಃ ಸ್ರಗ್ವೀ ಸಾಕ್ಷಾನ್ಮನ್ಮಥಮನ್ಮಥಃ ॥**

ಶುಕಮುನಿಗಳು ಪರೀಕ್ಷಿದ್ರಾಜನಿಗೆ ಹೇಳಿದರು—

ರಾಜನ್, ಕೃಷ್ಣನನ್ನು ಕಾಣಲು ಹಾತೊರೆಯುತ್ತ, ಗೋಪಿಯರು ಕರುಣಾಜನಕವಾಗಿ ಸ್ವರಮಣನಾದ ಹರಿಯನ್ನು ಕುರಿತು ಇಂಪಾದ ಧ್ವನಿಯಿಂದ ಹಾಡುತ್ತ ಬಿಕ್ಕುತ್ತ ನಾನಾ ಬಗೆಯ ವಿಲಾಪ ಮಾಡುತ್ತ ಕಣ್ಣೀರಿಟ್ಟರು—(ಸ್ವರ=ಧ್ವನಿ, ಸ್ವರಮಣನಾದ ಹರಿ, ಸ್ವತಂತ್ರನಾದ ಹರಿಯಲ್ಲಿ ರಮಿಸುವ ವಾಯು.)

ಪೀತಾಂಬರ ವನಮಾಲೆಗಳನ್ನು ಧರಿಸಿ ನಗುವ ಮುಖಕಮಲ ತೋರುತ್ತ ಕಣ್ಣಿಗೆ ಕಾಣುವ ಮನ್ಮಥಮನ್ಮಥನಾಗಿ ಮೈದೋರಿದ, ಶ್ರೀಕೃಷ್ಣ. (ಮನ್ಮಥನನ್ನು ಮಥಿಸಿದವ ಮನ್ಮಥಮಥ್, ರುದ್ರ. ಅವನನ್ನು ನಾರಾಯಣಿಯಾಗಿ ಮಥಿಸಿದವ ಮನ್ಮಥಮನ್ಮಥ, ಶ್ರೀಹರಿ. ಅಥವಾ ಮನ್ಮಥನಿಗೆ ಮನ್ಮಥತ್ವ ತಂದುಕೊಟ್ಟವ, ಹರಿ. ಇದರಿಂದ ಹರನನ್ನೇ ಮರುಳು ಮಾಡುವ ಸ್ತ್ರೀರೂಪನು ಗೋಪಿಯರಿಗೆ ಮರುಳಾದಾನೆ ? ಮನ್ಮಥನಿಗೆ ಮನ್ಮಥತ್ವ ಕೊಟ್ಟವ ಅವನ ವಶನಾದಾನೆ ಎಂದು ಧ್ವನಿತವಾಗುತ್ತದೆ.)

ಶ್ರೀಕೃಷ್ಣಾರ್ಪಣಮಸ್ತು

# ಶ್ರೀ ವೇಣು ಗೀತ

**ಗೋಪ್ಯ ಊಚುಃ—**

**ಅಕ್ಷಣ್ವತಾಂ ಫಲಮಿದಂ ನ ಪರಂ ವಿದಾಮಃ**
**ಸಖ್ಯಃ ಪಶೂನನು ವಿವೇಶಯತೋರ್ವಯಸ್ಯೈಃ ।**
**ವಕ್ತ್ರಂ ವ್ರಜೇಶಸುತಯೋರನುವೇಣು ಜುಷ್ಟಂ**
**ಯೈರ್ವಾ ನಿಪೀತಮನುರಕ್ತಕಟಾಕ್ಷಮೋಕ್ಷಮ್** ॥ ೧ ॥

ಗೋಪಿಯರು ಒಬ್ಬರಿಗೊಬ್ಬರು ಹೀಗೆ ಹೇಳಿಕೊಂಡರು—

ಗೆಳತಿಯರೆ, ನಂದಗೋಪನ ಮಕ್ಕಳು ರಾಮ ಕೃಷ್ಣರು ಸಂಜೆ ಗೋವುಗಳನ್ನು ಹಟ್ಟಿಗೆ ಸೇರಿಸಲೆಂದು ಗೆಳೆಯರೊಂದಿಗೆ ಬಂದು ವೇಣುಗಾನ ಮಾಡುತ್ತ ಪ್ರೀತಿಯ ಕಡೆಗಣ್ಣ ನೋಟ ಬೀರುತ್ತಿದ್ದರೆ ಅವರ ಮುಖದ ಸೊಬಗನ್ನು ಯಾರಾರು ತಮ್ಮ ಕಣ್ಣುಗಳಿಂದ ಕುಡಿದರೊ ಅವರೇ ನಿಜವಾಗಿ ಕಣ್ಣುಳ್ಳವರು, ಮುಕ್ತಾತ್ಮರಿಗೆ ಸಮಾನರು. ಅವರಿಗೆ ಆ ಸುಖವೆ ಉತ್ತಮ ಫಲ. ಇನ್ನು ಬೇರೇನಾದರೂ ಇರಬಹುದೆಂದು ನಾವು ಭಾವಿಸುವುದಿಲ್ಲ.

**ಚೂತಪ್ರವಾಲಬರ್ಹಸ್ತಬಕೋತ್ಪಲಾಬ್ಜ-**
**ಮಾಲಾನುರಕ್ತಪರಿಧಾನವಿಚಿತ್ರವೇಷೌ ।**
**ಮಧ್ಯೇ ವಿರೇಜತುರಲಂ ಪಶುಪಾಲಗೋಷ್ಠ್ಯಾಂ**
**ರಂಗೇ ಯಥಾ ನಟವರೌ ಕ್ವ ಚ ಗಾಯಮಾನೌ** ॥ ೨ ॥

ಮಾವಿನ ಚಿಗುರು, ನವಿಲಗರಿ, ನೈದಿಲೆ, ತಾವರೆಗಳ ಮಾಲೆಗಳಿಂದ ಯುಕ್ತವಾದ ಉಡುಗೆಗಳಿಂದ ಸುಂದರ ವೇಷ ತೊಟ್ಟು ಗೋವಳರ ಗುಂಪಿನ ನಡುವೆ ಆಗಾಗ ಹಾಡುತ್ತ ರಂಗಮಂಟಪದಲ್ಲಿ ಅಭಿನಯಿಸುವ ಶ್ರೇಷ್ಠನಟರಂತೆ ವಿರಾಜಮಾನರಾದರು, ರಾಮಕೃಷ್ಣರು.

('ಪಶುಪಾಲಗೋಷ್ಠ್ಯಾಂ' ಎಂದು ಸಪ್ತಮೀ ವಿಭಕ್ತಿ ಇರುವಾಗ 'ಮಧ್ಯೇ' ಎಂಬುದು ವ್ಯರ್ಥವೆನಿಸಿದರೆ 'ಮಧ್ಯೇವಿ' ಎಂದು ಪದವಿಟ್ಟುಕೊಂಡು 'ಹಕ್ಕಿಗಳ

ನಡುವೆ' ಎಂದು ಅರ್ಥವಿಟ್ಟುಕೊಂಡರಾಯಿತು. ಆ ಹಕ್ಕಿಗಳು ಸ್ವತಃ ಬಂದಿರಬಹುದು, ಇಲ್ಲವೆ ಆಟಕ್ಕಾಗಿ ಗೋವಳರು ಹಿಡಿದುತಂದಿರಬಹುದು.)

**ಗೋಪ್ಯಃ ಕಿಮಾಚರದಯಂ ಕುಶಲಂ ಸ್ಮ ವೇಣುರ್**
**ದಾಮೋದರಾಧರಸುಧಾಮಪಿ ಗೋಪಿಕಾನಾಮ್ ।**
**ಭುಂಕ್ತೇ ಸ್ವಯಂ ಯದವಶಿಷ್ಟರಸಂ ಹ್ರದಿನ್ಯೋ**
**ಹೃಷ್ಯತ್ತ್ವಚೋಽಶ್ರು ಮುಮುಚುಸ್ತರವೋ ಯಥಾರ್ಯಾಃ ॥ ೯ ॥**

ಗೋಪಿಯರೆ, ಈ ಕೊಳಲು ಹಿಂದಿನ ಜನ್ಮದಲ್ಲಿ ಏನು ಪುಣ್ಯ ಮಾಡಿತ್ತೊ! ಏಕೆಂದರೆ ಉತ್ತಮ ಗೀತಜ್ಞರಾದ ಬ್ರಹ್ಮಾದಿಗಳೆ ಹೊಗಳುವಂಥ, ಶ್ರೀಕೃಷ್ಣನ ಅಧರಸುಧೆಗೆ ಸಮಾನವಾದ ಗೀತರಸವನ್ನು ಕೊಳಲು ತಾನೆ ಆಸ್ವಾದಿಸುತ್ತದೆ! ಅದು ಆಸ್ವಾದಿಸಿ ಉಳಿದ ರಸವು ಹರಿಯುವ ಮಾರ್ಗದಲ್ಲೆಲ್ಲ ರೋಮಾಂಚಗೊಂಡ ವೃಕ್ಷದೇವತೆಗಳು ಆನಂದಬಾಷ್ಪ ಹರಿಸುತ್ತಾರೆ. ವೃಕ್ಷಗಳೂ ದರ್ಭೆಹುಲ್ಲಿನ ರೂಪದಲ್ಲಿ ರೋಮಾಂಚಗೊಂಡು ಮಕರಂದರಸದ ರೂಪದಲ್ಲಿ ಆನಂದಬಾಷ್ಪ ಸುರಿಸುತ್ತವೆ.

**ವೃಂದಾವನಂ ಸಖಿ ಭುವೋ ವಿತನೋತಿ ಕೀರ್ತಿಂ**
**ಯದ್ದೇವಕೀಸುತಪದಾಂಬುಜಲಬ್ಧಲಕ್ಷ್ಮಿ ।**
**ಗೋವಿಂದವೇಣುಮನು ಮತ್ತಮಯೂರನೃತ್ಯಂ**
**ಪ್ರೇಕ್ಷ್ಯಾದೃಶಾನುಚರಿತಾನ್ಯಸಮಸ್ತಸತ್ತ್ವಮ್ ॥ ೧೦ ॥**

ಗೆಳತಿ, ವೃಂದಾವನವು ಈ ಭೂಮಂಡಲಕ್ಕೇ ಕೀರ್ತಿ ತರುತ್ತಿದೆ. ಏಕೆಂದರೆ ಅದು ದೇವಕೀತನಯನ ಪಾದಕಮಲಸ್ಪರ್ಶದಿಂದ ಶ್ರೀಮಂತವಾಗಿದೆ. ('ಲಬ್ಧ-ಲಕ್ಷ್ಮಿ' ಎಂಬ ಪಾಠದಲ್ಲಿ 'ಹೆಜ್ಜೆಯ ಗುರುತಿಂದ ಕೂಡಿದೆ' ಎಂದರ್ಥ.) ಕೃಷ್ಣನ ವೇಣುಗಾನ ಕೇಳಿ ಆನಂದದಿಂದ ನವಿಲುಗಳು ಕುಣಿಯುವುದನ್ನು ಕಂಡು ಬೇರೆ ಪ್ರಾಣಿಗಳೂ ಅದೇ ರೀತಿ ವರ್ತಿಸುವುದು ವೃಂದಾವನದ ಇನ್ನೊಂದು ವೈಶಿಷ್ಟ್ಯ.

**ಧನ್ಯಾಃ ಸುಮೂಢಮತಯೋಽಪಿ ಹರಿಣ್ಯ ಏತಾ**
**ಯನ್ನಂದನಂದನಮುಪಾತ್ತವಿಚಿತ್ರವೇಷಮ್ ।**
**ಆಪೀಯ ವೇಣುರಸಿತಂ ಸಹಕೃಷ್ಣಸಾರಾಃ**
**ಪೂಜಾಂ ದಧುರ್ವಿರಚಿತಾಂ ಪ್ರಣಯಾವಲೋಕೈಃ ॥ ೧೧ ॥**

ಏನೂ ಅರಿಯದ ಈ ಹೆಣ್ಣುಜಿಂಕೆಗಳೂ ಗಂಡುಜಿಂಕೆಗಳ ಜೊತೆಗೆ ನಿಂತು ಸುಂದರವೇಷದ ನಂದಕುಮಾರನನ್ನ ಕಣ್ಣಿಂದ ಕುಡಿದುಬಿಡುವಂತೆ ನೋಡಿ, ಕಿವಿಯಿಂದ

ಅವನ ವೇಣುಧ್ವನಿಯನ್ನು ಪಾನ ಮಾಡಿ ಪ್ರೀತಿಯ ಕಣ್ಣೋಟಗಳಿಂದ ಅವನ ಆರಾಧನೆ ಮಾಡುತ್ತಿವೆ. ಧನ್ಯವಾಗುತ್ತಿವೆ.

**ಕೃಷ್ಣಂ ನಿರೀಕ್ಷ್ಯ ವನಿತೋತ್ಸವರೂಪಶೀಲಂ**
**ಶ್ರುತ್ವಾ ಚ ತತ್ಕ್ವಣಿತವೇಣುವಿಚಿತ್ರಗೀತಮ್ ।**
**ದೇವ್ಯೋ ವಿಮಾನಗತಯಃ ಸ್ಮರನುನ್ನಸಾರಾ**
**ಭ್ರಶ್ಯತ್ಪ್ರಸೂನಕಬರಾ ಮುಮುಹುರ್ವಿನೀವ್ಯಃ ॥ ೬ ॥**

ವನಿತೆಯರು ಬಯಸುವಂತಹ ರೂಪ ಉಳ್ಳವರಲ್ಲೆಲ್ಲ ಕೃಷ್ಣನೆ ಮೊದಲಿಗನು. ವಿಮಾನಗಳಲ್ಲಿ ಸಂಚರಿಸುವ ದೇವತಾಸ್ತ್ರೀಯರು ಅವನನ್ನು ನೋಡಿ, ಅವನು ನುಡಿಸುವ ಕೊಳಲಿನ ಮಧುರಗಾನವನ್ನು ಕೇಳಿ ಮನ್ಮಥಬಾಧೆಗೊಳಗಾಗಿ ಪರವಶರಾಗುತ್ತಾರೆ. ಅವರ ಕೇಶಪಾಶದಿಂದ ಹೂಗಳು ಉದುರುತ್ತವೆ, ಉಟ್ಟ ಸೀರೆ ಸಡಿಲಗೊಳ್ಳುತ್ತವೆ. ಧನ್ಯರು, ಅವರು.

**ಗಾವಶ್ಚ ಕೃಷ್ಣಮುಖನಿರ್ಗತವೇಣುಗೀತ-**
**ಪೀಯೂಷಮುತ್ತಭಿತಕರ್ಣಪುಟೈಃ ಪಿಬಂತ್ಯಃ ।**
**ಶಾವಸ್ಸ್ರುತಸ್ತನಪಯಃಕಬಲಾಃ ಸ್ಮ ತಸ್ಥು-**
**ರ್ಗೋವಿಂದಮಾತ್ಮನಿ ದೃಶಾಶ್ರುಕಲಾಃ ಸ್ಪೃಶಂತ್ಯಃ ॥ ೭ ॥**

ಕರುಗಳ ಸ್ಮರಣೆಯಿಂದ ಕೆಚ್ಚಲ ಹಾಲು ಸುರಿಯುತ್ತಿದ್ದಂತೆಯೆ ಬಾಯ ಹುಲ್ಲಿನ ಕವಳವೂ ಕೆಳಗೆ ಬೀಳುತ್ತಿದ್ದಂತೆಯೆ ಗೋವುಗಳು ಕೃಷ್ಣನ ಮುಖದಿಂದ ಹೊರಡುವ ವೇಣುಗಾನದ ಅಮೃತವನ್ನು ಎತ್ತಿದ ಕಿವಿಯ ಬೊಗಸೆಗಳಿಂದ ಕುಡಿದುವು. ಕೃಷ್ಣನನ್ನು ತಮ್ಮ ಹೃದಯದಲ್ಲಿ ತುಂಬಿಕೊಂಡು ಕಣ್ಣಿಂದ ಆನಂದ ಬಾಷ್ಪ ಸುರಿಸಿದುವು.

**ಪ್ರಾಯೋ ಬತಾಂಬ ಮುನಯೋ ವಿಹಗಾ ವನೇಽಸ್ಮಿನ್**
**ಕೃಷ್ಣೇಕ್ಷಿತಾಸ್ತದುದಿತಂ ಕಲವೇಣುಗೀತಮ್ ।**
**ಆರುಹ್ಯ ಯೇ ದ್ರುಮಭುಜಾನ್ ರುಚಿರಪ್ರವಾಲಾನ್**
**ಶೃಣ್ವಂತಿ ಮೀಲಿತದೃಶೋ ವಿಗತಾನ್ಯವಾಚಃ ॥ ೮ ॥**

ಅಮ್ಮ, ಏನಾಶ್ಚರ್ಯ! ಈ ಕಾಡಿನ ಪಕ್ಕಿಗಳು ಸಾಮಾನ್ಯವಾಗಿ ಎಲ್ಲವೂ ಮುನಿಗಳೆ ಆಗಿವೆ! ಏಕೆಂದರೆ ಒಳ್ಳೆಯ ಚಿಗುರುಳ್ಳ ಮರಗಳ ಕೊಂಬೆಗಳನ್ನೇರಿ ಕುಳಿತು ಈ ಹಕ್ಕಿಗಳು ಕೃಷ್ಣನನ್ನು ನೋಡಿ ತಮ್ಮ ಕೂಗನ್ನು ನಿಲ್ಲಿಸಿ ಮೌನವಾಗಿ ಕಣ್ಣುಮುಚ್ಚಿ ಕೃಷ್ಣನ ಮಧುರವೇಣುಗಾನವನ್ನೆ ಆಲಿಸುತ್ತವೆ!

ನದ್ಯಸ್ತದಾ ತದುಪಧಾರ್ಯ ಮುಕುಂದಗೀತಂ
ಆವರ್ತಲಕ್ಷಿತಮನೋಭವಭಗ್ನವೇಗಾಃ ।
ಆಲಿಂಗನಸ್ಥಗಿತಮೂರ್ಮಿಭುಜೈರ್ಮುರಾರೇಃ
ಗೃಹ್ಣಂತಿ ಪಾದಯುಗಲಂ ಕಮಲೋಪಹಾರಾಃ ॥ ೯ ॥

ಕೃಷ್ಣನು ಹಾಡಲು ತೊಡಗಿದನೆಂದರೆ ನದಿಗಳೂ ಕೇಳಿ ಮನ್ಮಥಬಾಧೆಯಿಂದ ನಿಧಾನವಾಗಿ ಹರಿಯುತೊಡಗುತ್ತವೆ. ಇದನ್ನು ಸ್ಪಷ್ಟವಾಗಿ ಸೂಚಿಸುವಂತೆ ಸುಳಿಗಳನ್ನು ತೋರುತ್ತವೆ. ಕೃಷ್ಣನ ಮೈಯ ಸ್ಪರ್ಶವಾಯಿತೆಂದರೆ ಅವುಗಳ ಅಲೆಗಳೆಂಬ ತೋಳುಗಳು ಆನಂದಗೊಂಡು ಕಮಲಗಳನ್ನು ಕಾಣಿಕೆಯಾಗಿ ಕೊಡುತ್ತ ಅವನ ಪಾದಗಳನ್ನು ಸ್ಪರ್ಶಿಸುತ್ತವೆ.

ದೃಷ್ಟ್ವಾಽಽತಪೇ ವ್ರಜಪಶೂನ್ ಸಹ ರಾಮಗೋಪೈಃ
ಸಂಚಾರಯಂತಮನು ವೇಣುಮುದೀರಯಂತಮ್ ।
ಪ್ರೇಮಪ್ರವೃದ್ಧ ಉದಿತಃ ಕುಸುಮಾವಲೀಭಿಃ
ಸಖ್ಯುರ್ವ್ಯಧಾತ್ ಸ್ವವಪುಷಾಂಬುದ ಆತಪತ್ರಮ್ ॥ ೧೦ ॥

ಬಲರಾಮ ಮತ್ತು ಗೋವಳರೊಂದಿಗೆ ಕೃಷ್ಣನು ಬಿಸಿಲಿನಲ್ಲಿ ಗೋಕುಲದ ದನ ಮೇಯಿಸುತ್ತ ಸಂಚರಿಸುವುದನ್ನೂ, ವೇಣುಗಾನ ಮಾಡುವುದನ್ನೂ ಮೋಡವು ಮೇಲಿನಿಂದ ನೋಡಿ, ಉಕ್ಕಿದ ಪ್ರೇಮದಿಂದ ರೋಮಾಂಚನಗೊಂಡು, ತನ್ನಂತೆ ನೀಲವರ್ಣದವನು, ಗೆಳೆಯನೆಂಬ ಭಾವನೆಯಿಂದ, ತನ್ನ ಮೈ ಹಾಗೂ ಗಾಳಿಯು ತಂದ ಹೂಗಳಿಂದ ನೆರಳು ಕೊಡುತ್ತ ಕೊಡೆ ಬಿಡಿಸಿದಂತೆ ನಿಂತಿತು.

ಪೂರ್ಣಾಃ ಪುಲಿಂದ್ಯ ಉರುಗಾಯಪದಾಬ್ಜರಾಗ-
ಶ್ರೀಕುಂಕುಮೇನ ದಯಿತಾಸ್ತನಮಂಡಿತೇನ ।
ತದ್ದರ್ಶನಸ್ಮರರುಜಸ್ತೃಣರೂಷಿತೇನ
ಲಿಂಪಂತ್ಯ ಆನನಕುಚೇಷು ಜಹುಸ್ತದಾಧಿಮ್ ॥ ೧೧ ॥

ಕೃಷ್ಣನ ಪಾದಕಮಲಗಳ ಸಂಪರ್ಕದಿಂದ ಕೆಂಪಾದ ಶ್ರೀಕುಂಕುಮವು ಅವನ ಪ್ರೇಯಸಿಯ ಸ್ತನಗಳನ್ನು ಅಲಂಕರಿಸಿ ಹುಲ್ಲಿನ ಮೇಲೆ ಬಿದ್ದಿದೆ. ಕೃಷ್ಣದರ್ಶನದಿಂದ ಮನ್ಮಥಬಾಧೆಗೊಳಗಾದ ಬೇಡಿತಿಯರು ಆ ಶ್ರೀ ಕುಂಕುಮವನ್ನೆ ತೆಗೆದು ತಮ್ಮ ಮುಖ ಮತ್ತು ಸ್ತನಗಳಿಗೆ ಬಳಿದುಕೊಂಡು ವಿರಹತಾಪವನ್ನು ಮರೆತರು. ಧನ್ಯರು, ಅವರು.

(ತಮ್ಮ ಪೂರ್ವಿಕಳಾದ ಶಬರಿ ರಾಮನ ಸೇವೆ ಮಾಡಿ ಸದ್ಗತಿ ಪಡೆದುದನ್ನು ನೆನೆದು, ಬೇಡಿತಿಯರು, ಆ ರಾಮನೆ ಈಗ ಕೃಷ್ಣನಾಗಿ ಬಂದಿರುವನೆಂದು ಅವನ ದರ್ಶನದಿಂದ ಧನ್ಯರಾಗಬೇಕೆಂದೂ ಬಂದರೆಂಬುದು ಇಲ್ಲಿ ಧ್ವನಿತವಾಗುತ್ತಿದೆ. ಕೃಷ್ಣನಿನ್ನೂ ಪ್ರೇಯಸಿಯರಿಂದ ಮರೆಯಾಗಿರುವಾಗ ಪ್ರೇಯಸೀಸ್ತನ ಕುಂಕುಮಕ್ಕೆ ಪ್ರಸಕ್ತಿ ಎಲ್ಲಿ ಎಂದರೆ ಭೂದೇವಿಯೆ ಕೃಷ್ಣನ ಪ್ರೇಯಸಿ. ಪರ್ವತಗಳೆ ಆಕೆಯ ಸ್ತನಗಳು. ಕೃಷ್ಣನು ಆ ಪರ್ವತಗಳ ಮೇಲೆ ನಿಂತು ಗೋವುಗಳನ್ನು ಕರೆಯುವಾಗ ಅವನ ಪಾದಕಮಲಗಳಿಗೆ ಲೇಪಿತವಾದ ಶ್ರೀಕುಂಕಮವು ಹುಲ್ಲಿನ ಮೇಲೆ ಬೀಳುತ್ತದೆ ಎಂದಿಟ್ಟುಕೊಳ್ಳಬೇಕು. 'ಸಮುದ್ರವಸನೇ ದೇವಿ ಪರ್ವತಸ್ತನ ಮಂಡಿತೇ' ಎನ್ನುತ್ತಾರಲ್ಲವೆ?)

**ಹಂತಾಯಮದ್ರಿರಬಲಾ ಹರಿದಾಸವರ್ಯೋ**
**ಯದ್ ರಾಮಕೃಷ್ಣಚರಣಸ್ಪರ್ಶಪ್ರಮೋದಃ ।**
**ಮಾನಂ ತನೋತಿ ಸಹಗೋಗಣಯೋಸ್ತಯೋರ್ಯತ್**
**ಪಾನೀಯಸೂಯವಸಕಂದರಕಂದಮೂಲೈಃ** ॥ ೧೨ ॥

ಅಬಲೆಯರೆ, ಏನಾಶ್ಚರ್ಯ! ಈ ಬೆಟ್ಟವು ಓರ್ವ ಶ್ರೇಷ್ಠ ಹರಿದಾಸನೆ ಆಗಿದ್ದಾನೆ. ಏಕೆಂದರೆ ಅವನು ತನ್ನಲ್ಲಿಗೆ ಬರುವ ರಾಮಕೃಷ್ಣರ ಚರಣಸ್ಪರ್ಶದಿಂದ ಆನಂದಗೊಳ್ಳುತ್ತಾನೆ! ಅವರಿಗೂ ಗೋವುಗಳಿಗೂ ಒಳ್ಳೆಯ ನೀರು ಹುಲ್ಲು ಗುಹೆಗಳು ಕಂದಮೂಲಗಳು ಇವುಗಳಿಂದ ಸತ್ಕಾರ ಮಾಡುತ್ತಾನೆ.

**ಗಾ ಗೋಪಕೈರನುವನಂ ನಯತೋರುದಾರ-**
**ವೇಣುಸ್ವನೈಃ ಕಲಪದೈಸ್ತನುಭೃತ್ಸು ಸಖ್ಯಃ ।**
**ಅಸ್ಪಂದನಂ ಗತಿಮತಾಂ ಪುಲಕಂ ತರೂಣಾಂ**
**ನಿರ್ಯೋಗಪಾಶಕೃತಲಕ್ಷಣಯೋರ್ವಿಚಿತ್ರಮ್** ॥ ೧೩ ॥

ರಾಮಕೃಷ್ಣರು ಗೋಪಾಲರೊಂದಿಗೆ ಎಲ್ಲ ಕಾಡುಗಳಲ್ಲಿಯೂ ಗೋವುಗಳನ್ನು ನಡೆಸುತ್ತ ಮಧುರವಾಗಿ ಒಳ್ಳೆಯ ವೇಣುಧ್ವನಿ ಮಾಡುತ್ತಾರೆ. ಹೆಗಲ ಮೇಲೆ ಕವಣೆ ಹಗ್ಗವನ್ನು ಹಾಕಿಕೊಂಡಿರುತ್ತಾರೆ. ಗೀತಧ್ವನಿ ಕೇಳಿದ ಜಂಗಮ ಪ್ರಾಣಿಗಳನ್ನು ಸ್ಥಾವರಜಂತುಗಳಂತೆ ಸ್ತಬ್ಧಗೊಳಿಸುತ್ತಾರೆ. ಸ್ಥಾವರಗಳನ್ನು ಜಂಗಮಗಳಂತೆ ರೋಮಾಂಚಗೊಳಿಸುತ್ತಾರೆ. ಅವರಿಗೆ ಜೀವಿಗಳಲ್ಲಿರುವ ಪ್ರೀತಿ ಬಲು ವಿಚಿತ್ರವಾದುದು.

**ಏವಂವಿಧಾ ಭಗವತೋ**
**ಯಾ ವೃಂದಾವನಚಾರಿಣಃ ।**
**ವರ್ಣಯಂತ್ಯೋ ಮಿಥೋ ಗೋಪ್ಯಃ**
**ಕ್ರೀಡಾಸ್ತನ್ಮಯತಾಂ ಯಯುಃ** ॥ ೧೮ ॥

ವೃಂದಾವನದಲ್ಲಿ ವಿಹರಿಸುವ ಭಗವಂತನ ಇಂಥ ಲೀಲೆಗಳನ್ನು ಗೋಪಿಯರು ತಮ್ಮತಮ್ಮೊಳಗೆ ವರ್ಣಿಸುತ್ತ ತನ್ಮಯರಾಗಿಹೋದರು.

ಶ್ರೀಹರಯೇ ನಮಃ ಶ್ರೀಕೃಷ್ಣಾರ್ಪಣಮಸ್ತು

# ಭ್ರಮರ ಗೀತ

**ಗೋಪ್ಯುವಾಚ—**

**ಮಧುಪ ಕಿತವಬಂಧೋ ಮಾಸ್ಪೃಶಾಸ್ಮಾನ್ ಸಪತ್ನ್ಯಾಃ**
**ಕುಚವಿಲುಲಿತ ಮಾಲಾಕುಂಕುಮಶ್ಮಶ್ರುಭಿಸ್ತ್ವಂ ।**
**ವಹತು ಮಧುಪತಿಸ್ತನ್ಮಾನಿನೀನಾಂ ಪ್ರಸಾದಂ**
**ಯದುಸದಸಿ ವಿಡಂಬ್ಯಂ ಯಸ್ಯ ದೂತಸ್ತ್ವಮೀದೃಕ್ ॥೧॥**

ಓ ದುಂಬಿಯೇ ಮೋಸಗಾರನಾದ ಕೃಷ್ಣನ ಕಡೆಯುವ ನೀನು ನಮ್ಮನ್ನು ಸ್ಪರ್ಶಿಸಬೇಡ. ನಮ್ಮ ಕಾಲು ಹಿಡಿಯಬೇಡ ('ಮಾಸ್ಪೃಶಾಂಘ್ರಿಂ' ಎಂದು ಪಾಠಾಂತರ) ಆ ಕೃಷ್ಣ ಮಧುರೆಯ ಹೆಣ್ಣುಗಳನ್ನೇ ಸಂತೋಷಗೊಳಿಸುತ್ತಿರಲಿ. ಯಾದವರ ಸಭೆಯಲ್ಲಿ ಹೇಳಿಕೊಳ್ಳಲು ಅದುವೆ ಒಳ್ಳೆಯ ವಿಡಂಬನೆಯಾದೀತು. ನೀನು ನಮ್ಮ ಸವತಿಯಾದ ಮಧುರೆಯ ಹೆಣ್ಣಿನ ಎದೆ ಮೇಲಿನ ಹೂಮಾಲೆಯ ಕುಂಕುಮವನ್ನು ಮೀಸೆಗಳಿಂದ ಸ್ಪರ್ಶಿಸಿ ಅವೇ ಮೀಸೆಗಳಿಂದ ನಮ್ಮನ್ನು ಸ್ಪರ್ಶಿಸಬೇಡ. ನೀನು ಕೃಷ್ಣನ ದೂತನೆ ತಾನೆ ! ನೀನು ಹಾಗೆ ಮಾಡುವುದು ಸಹಜ.

ದತ್ತೂರ ಪುಷ್ಪವನ್ನು ಸದಾ ಸೇವಿಸಿ ಚಿತ್ತ ಭ್ರಂಶ ಹೊಂದಿದ ನೀನು ನಮ್ಮ ಸವತಿಯರಾದ ಮಧುರೆಯ ಹೆಣ್ಣುಗಳ ಎದೆ ಮೇಲಿನ ಕೆಂಪುದಾಸವಾಳದ ಮಕರಂದದಿಂದ ಲಿಪ್ತವಾದ ಆ ನಿನ್ನ ಮೀಸೆಗಳಿಂದ ನಮ್ಮನ್ನು ಸ್ಪರ್ಶಿಸಬೇಡ. ನೀನು ವಸಂತನ ಆಳು. ವಸಂತ ಕೃಷ್ಣನ ದೂತ. ಆದ್ದರಿಂದಲೆ ನೀನು ನಮ್ಮನ್ನು ಮುಟ್ಟಿ ವಿವಶಗೊಳಿಸುತ್ತಿರುವಿ. ಸದಾ ಹೂಗಳ ಒಳ್ಳೆಯ ರಾಶಿಯಲ್ಲಿಯೆ ಸಂಚರಿಸುವ ನೀನು ನಮ್ಮನ್ನು ಮುಟ್ಟಿ ಇನ್ನೂ ಹೆಚ್ಚಿನ ಕಾಮ ಬಾಧೆಯ ಮೈಕೈನೋವನ್ನು ಉಂಟುಮಾಡು. ಅದರಿಂದ ನಿನಗೆ ತೃಪ್ತಿಯಾಗುವುದಾದರೆ ಆಗಲಿ. (ಯತ್ ಕಿತವೋ ಮಧುಪತಿಃ ತತ್ ತಸ್ಮಾತ್ ಮಾನಿನೀನಾಂ ನಃ ಉ ಸದಸಿ ವಿಡಂಬ್ಯಂ ಪ್ರಸಾದಂ ವಿಶೀರ್ಣತಾಂ ವಹತು ಪುನರಪಿ ದದಾತು)

ಮೇಲು ನೋಟಕ್ಕೆ ಗೋಪಿ ಹೀಗೆ ಹೇಳುತ್ತಿದ್ದರೂ ಅಂತರಂಗದ ಭಾವ ಬೇರೆಯೆ ಇದೆ—

ಓ ದುಂಬಿಯೆ, ಮಹಾಲಕ್ಷ್ಮಿಯ ಎದೆಮೇಲಿನ ಹೂಮಾಲೆಯ ಕುಂಕುಮ ಲೇಪದಿಂದ ಅಲಂಕೃತವಾದವು ನಿನ್ನ ಮೀಸೆಗಳು. ಅವುಗಳಿಂದ ನಮ್ಮನ್ನು ಸ್ಪರ್ಶಿಸು. ಮಧುರೆಯ ಹೆಣ್ಣುಗಳೂ ನಮ್ಮಂತೆ ಲಕ್ಷ್ಮಿಯ ಆವೇಶ ಉಳ್ಳವರಾಗಿದ್ದು ನಮಗೆ ಮಾನ್ಯರೇ ಆಗಿದ್ದಾರೆ. ಅವರನ್ನು ಕೃಷ್ಣ ಸಂತೋಷಪಡಿಸಲಿ. ಈ ಪ್ರಣಯ ಪ್ರಸಂಗ ಪವಿತ್ರವಾಗಿದ್ದು ಯಾದವರ ಸಭೆಯಲ್ಲಿ ಮಾತ್ರವಲ್ಲ ರುದ್ರಾದಿದೇವತೆಗಳ ಸಭೆಗಳಲ್ಲಿಯೂ ಗೌರವಾರ್ಹವಾಗಿದೆ. ಆ ಕೃಷ್ಣನ ದೂತನಾದ ನೀನೂ ಜ್ಞಾನಿಯಾಗಿದ್ದು ಅವನ ಅಂಗಸಂಗಯೋಗ್ಯರಾದ ಹೆಣ್ಣುಗಳಲ್ಲೆಲ್ಲಾ ರಮಾವೇಶವನ್ನು ಕಾಣುವವನೆ. (ಈಂ ಲಕ್ಷ್ಮೀಂ ಪಶ್ಯತೀತಿ ಈದೃಕ್)

**ಸಕೃದಧರಸುಧಾಂ ಸ್ವಾಂ ಮೋಹಿನೀಂ ಪಾಯಯಿತ್ವಾ**
**ಸುಮನಸ ಇವ ಸದ್ಯಃ ಕಸ್ತ್ಯಜೇನ್ಮಾಂ ಭವಾದೃಕ್ ।**
**ಪರಿಚರತಿ ಕಥಂ ತತ್ಪದ್ಮಕಿಂಜಲ್ಕಪಾದಂ**
**ಹ್ಯಪಿ ಬತ ಹೃತಚಿತ್ತಾ ಉತ್ತಮಶ್ಲೋಕಜಲ್ಪೈಃ** ||೨||

ಆ ಕೃಷ್ಣ ನಿಜವಾಗಿಯೂ ಮೋಸಗಾರ. ಒಮ್ಮೆ ಮಾತ್ರ ನನಗೆ ಅಧರಾಮೃತವನ್ನುಣಿಸಿ ಮೋಹದಲ್ಲಿ ಕೆಡವಿದವನು ಮತ್ತೆ ನನ್ನ ಕಡೆಗೆ ಬರಲೇ ಇಲ್ಲ. ಹೂಗಳನ್ನು ಮೂಸಿ ನೋಡಿ ಬಿಟ್ಟುಬಿಡುವಂತೆ ನನ್ನನ್ನು ಯಾರು ಹೀಗೆ ಬಿಟ್ಟುಬಿಡುತ್ತಾನೆ ? ನಾನು ಮಾತ್ರ ಅವನನ್ನು ಬಿಡಲಾರೆ. ನಿತ್ಯಮುಕ್ತಳಾದ ರಮೆಯೂ ಅವನ ಚರಣಕಮಲವನ್ನು ಸೇವಿಸುತ್ತಿರುವಳೆಂದ ಮೇಲೆ ಭವಸಾಗರದಲ್ಲಿ ಮುಳುಗಿರುವ ನಮ್ಮಂಥವರ ಪಾಡೇನು ? ಒಳ್ಳೆಯ ಕೀರ್ತಿಶಾಲಿ ಕೃಷ್ಣ. ಅವನ ನುಡಿಗಳಿಗೆ ನಾವು ಮನಸೋತಿದ್ದೇವೆ. ಆದರೂ ನಾವೇನೂ ಸ್ವತಃ ಕೃಷ್ಣನ ಬಳಿಗೆ ಓಡಿದವರಲ್ಲ. 'ಬನ್ನಿ, ಅಧರಸುಧೆಯನ್ನು ಪಾನಮಾಡಿ' ಎಂದು ಕರೆಕರೆದು ನಮಗೆ ಉಣಿಸಿದವನು ಈಗ ನಮ್ಮನ್ನು ಮರೆತು ಬಿಡುವುದು ನ್ಯಾಯವೇ ? ನಾವೇನು ಸುಂದರಿಯರಲ್ಲವೆ ? ಹೂವಿನಂಥ ಮೂಗು ಕಣ್ಣು ಕಿವಿ ಮುಂತಾದ ಅಂಗಗಳುಳ್ಳವರು ನಾವು. ಅವನೂ ಪ್ರಣಯದಾಟದಲ್ಲಿ ಉದಾಸೀನನೇನಲ್ಲ. ಮನ್ಮಥನಿಗೆ ಆಶ್ರಯನೆಂದು ಪ್ರಸಿದ್ಧನಾಗಿರುವವನು. ಯಾವ ರೀತಿಯಿಂದ ವಿಚಾರಮಾಡಿದರೂ ಅವನು ನಮ್ಮನ್ನು ಬಿಡುವುದು ತರವಲ್ಲ. (ಭವಂ ಸಂಸಾರಂ ನ ಪಶ್ಯತೀತಿ ನಿತ್ಯಮುಕ್ತಾ ರಮಾಽಪಿ । ಹೇ ಅ ಭಗವನ್ । ಪಿಬತ ಇತಿ ಪಾಯಯಿತ್ವಾ । ಮಾಮಿತಿ ಮದಾದ್ಯಾ ಇತ್ಯರ್ಥಃ ॥ ಸುಮವತ್ ತಿಲಕುಸುಮವತ್ ನಾಸಿಕಾ ಯಾಸಾಂ ತಾಃ । ಇಃ ಮನ್ಮಥಃ ವಸ್ಯತಾಸ್ಮಿನ್ ಸಃ ಇವಸನ್ ಇತಿ ಯಂ ಯಶೋ ಯಸ್ಯ ಸಃ ಇವಸದ್ಯಃ ।)

**ಕಿಮಿಹ ಬಹು ಷಡಂಘ್ರೇ ಗಾಯಸಿ ತ್ವಂ ಯದೂನಾಂ**
**ಅಧಿಪತಿಮಗೃಹಾಣಾಮಗ್ರತೋ ನಃ ಪುರಾಣಂ ।**
**ವಿಜಯಸಖಸಖೀನಾಂ ಗಾಯತಾಂ ತತ್ಪ್ರಸಂಗ**
**ಕ್ಷಪಿತಕುಚರುಜಸ್ತೇ ಕಲ್ಪಯಂತೀಷ್ಟಮಿಷ್ಟಾಃ** ||೩||

ಓ ದುಂಬಿಯೆ ಆ ಯದುಪತಿಯನ್ನು ನಮ್ಮ ಮುಂದೆ ಏಕೆ ಕೊಂಡಾಡುವಿ ? ಮಥುರೆಯ ಹೆಣ್ಣುಗಳ ಬಳಿ ಹಾಡು. ವನಚಾರಿಗಳಾದ ನಾವು ಈಗಲೂ ಮನೆ ಮಠವಿಲ್ಲದವರು ಕೃಷ್ಣನೀಗ ಪಟ್ಟಣವಾಸಿ. ಅವನೊಡನೆ ನಾವು ಹಿಂದೆ ಕಳೆದ ದಿನಗಳ ಬಗ್ಗೆ ಈಗ ಹಾಡಿದರೇನು ಪ್ರಯೋಜನ ? ಹಾಡುವುದು ನನ್ನ ಸ್ವಭಾವ ಎನ್ನುವಿಯಾದರೆ ಕಂಸನನ್ನು ಗೆದ್ದ ಕೃಷ್ಣನ ಬಳಿ ಮಥುರೆಯ ಹೆಣ್ಣುಗಳಿರುವಲ್ಲಿ ಹಾಡು. ಕೃಷ್ಣ ಅವರನ್ನಾಲಿಂಗಿಸಿ ಅವರೆದೆಯ ಸಂತಾಪವನ್ನು ಕಳೆಯುತ್ತಿದ್ದಾನೆ. ಅವರು ಕೃಷ್ಣನ ಯಶೋಗಾನವನ್ನು ಕೇಳಿ ಸಂತುಷ್ಟರಾಗಿ ನಿನಗೇನು ಬೇಕೊ ಅದೆಲ್ಲವನ್ನೂ ಕೊಟ್ಟುಬಿಡುತ್ತಾರೆ.

**ದಿವಿ ಭುವಿ ಚ ರಸಾಯಾಂ ಕಾಃ ಸ್ತ್ರಿಯಸ್ತದ್ದುರಾಪಾಃ**
**ಕಪಟರುಚಿರಹಾಸಭ್ರೂವಿಜೃಂಭಸ್ಯ ಯಾಃ ಸ್ಯುಃ ।**
**ಚರಣರಜ ಉಪಾಸ್ತೇ ಯಸ್ಯ ಭೂತಿರ್ವಯಂ ಕಾ**
**ಅಪಿ ಚ ಕೃಪಣಪಕ್ಷೇ ಉತ್ತಮಶ್ಲೋಕಶಬ್ದಃ** ||೪||

ಸ್ವರ್ಗ ಭೂಮಿ ಪಾತಾಳಗಳಲ್ಲಿ ಕೃಷ್ಣನಿಗೆ ಅವನ ಕಪಟದ ನಗು ಮತ್ತು ಹುಬ್ಬಿನ ಕುಣಿತಗಳಿಗೆ ವಶರಾಗದ ಹೆಣ್ಣುಗಳು ಯಾರಿರಬಹುದು ? ಏಕೆಂದರೆ ಮಹಾಲಕ್ಷ್ಮಿಯೆ ಅವನ ಪಾದಧೂಳಿಯನ್ನು ಸೇವಿಸುತ್ತಿದ್ದಾಳೆ. ಇನ್ನು ನಮ್ಮಂಥವರ ಪಾಡೇನು ? ಆದ್ದರಿಂದ ಅವನು ದೀನರಾದ ನಮ್ಮ ಬಳಿಗೆ ತಿರುಗಿ ಬರುವನೆಂಬುದು ಸುಳ್ಳು. ನಮ್ಮ ಪಾಲಿಗೆ ಕೃಷ್ಣ ಕೃಷ್ಣ ಎಂದು ಅವನ ನಾಮಜಪ ಮಾಡುವುದೊಂದೆ ಉಳಿದಿದೆ. ಅವನನ್ನು ಸಂಧಿಸುವಾಸೆ ಬಲು ದೂರ. ದುಂಬಿಯೆ, ನೀನು ಅವನನ್ನು ತೋರಿಸದೆ ಕೇವಲ ಅವನ ಯಶಸ್ಸನ್ನು ಹಾಡುತ್ತಾ ನಮ್ಮನ್ನು ವಂಚಿಸುತ್ತಿರುವಿ. ನೀನು ಸ್ವರ್ಗದಲ್ಲಾಗಲಿ ಭೂಮಿಯಲ್ಲಾಗಲಿ ಎಲ್ಲಿಯಾದರೂ ಸಂಚರಿಸು. ನಮ್ಮ ಬಳಿ ಸುಳಿಯಬೇಡ.

**ವಿಸೃಜ ಶಿರಸಿ ಪಾದಂ ವೇದ್ಮ್ಯಹಂ ಚಾಟುಕಾರೈ-**
**ರನುನಯವಿದುಸ್ತೇಽಭ್ಯೇತ್ಯ ದೌತ್ಯೈರ್ಮುಕುಂದಾತ್ ।**
**ಸ್ವಕೃತ ಇಹ ವಿಸೃಷ್ಟಾಪತ್ಯಪತ್ಯನ್ಯಲೋಕಾ**
**ವ್ಯಸೃಜದಕೃತಚೇತಾಃ ಕಿಂ ನು ಸಂಧೇಯಮಸ್ಮಿನ್** ||೫||

ನನ್ನ ತಲೆಯ ಮೇಲೆ ಕಾಲಿಡಬೇಡ. ನಿನ್ನ ತಲೆಯ ಮೇಲೆ ನಮ್ಮ ಕಾಲನ್ನು ಇರಿಸಿಕೊಳ್ಳಲೂ ಬೇಡ. ಮೋಸಗಾರ ಕೃಷ್ಣನ ದೂತ ನೀನೂ ಮೋಸಗಾರನೆಂಬುದು ನನಗೆ ಗೊತ್ತು; ಮನ ಒಲಿಸುವ ರಂಗಿನ ಮಾತು ಸಾಕು. ಅದರಿಂದೇನೂ ಫಲವಿಲ್ಲ. ದೂತನಾಗಿ ಕೃಷ್ಣನ ಬಳಿಗೇ ಹೋಗು. ನಾವು ಪತಿ ಸುತ ಬಾಂಧವ

ರನ್ನೆಲ್ಲಾ ತೊರೆದು ಅವನ ಬಳಿಗೆ ಬಂದರೆ ಅವನು ನಮ್ಮನ್ನು ತೊರೆದು ವಂಚನೆ ಮಾಡಿದ. ಕೃತಜ್ಞತೆಯೊಂದಿಷ್ಟು ಇಲ್ಲದ ಅವನೊಡನೆ ನಾವಿನ್ನು ಸೇರುವುದೇನಿದೆ ? ಈ ವಿರಹ ದುಃಖ ನಮ್ಮನ್ನುಯಮನ ಬಳಿಗೊಯ್ಯುವುದು ನಿಶ್ಚಿತ. (ಹೇ ಸಂಧೇ ವಿರಹಜಬಾಧೇ, ಪಾದಂ ಯಮಸ್ಯ ನಯ ।)

**ಮೃಗಯುರಿವ ಕಪೀಂದ್ರಂ ವಿವ್ಯಧೇ ಯಃ ಕಿರಾತಃ**
**ಸ್ತ್ರಿಯಮಕೃತ ವಿರೂಪಾಂ ಸ್ತ್ರೀಜಿತಃ ಕಾಮಯಾಬಾನಾಂ ।**
**ಬಲಿಮಪಿ ಬಿಲಮಾಸಂ ವೇದವಿದ್ವರ್ಗವಂದ್ಯ-**
**ಸ್ತದಲಮಸಿತಸಖ್ಯೈರ್ದುಸ್ತ್ಯಜಸ್ತತ್ಕಥಾರ್ಥಃ ॥೬॥**

ಮಧುರೆಯ ಹೆಣ್ಣುಗಳಿಗೆ ವಶನಾಗಿ ಕೃಷ್ಣ ನಮ್ಮನ್ನು ವಂಚಿಸಿದ. ಆತ ಹಿಂದೆಯೂ ರಾಮನಾಗಿದ್ದಾಗ ಏಕಪತ್ನೀವ್ರತಸ್ಥ ಶಮಾದಿಗುಣಸಂಪನ್ನನಾಗಿದ್ದರೂ ಹೆಂಡತಿ ಕಳೆದು ಹೋದ ಚಿಂತೆಯಲ್ಲಿ ಬೇಡನಂತೆ ಮರೆಯಲ್ಲಿ ನಿಂತು ಅನ್ಯಾಯವಾಗಿ ವಾಲಿಯನ್ನು ಕೊಂದ. ಯೋಗ್ಯ ಪತಿಯ ಅನ್ವೇಷಣೆ ಮಾಡುತ್ತಿದ್ದ ಶೂರ್ಪಣಖಿಯನ್ನು ಕಿರಾತನಂತೆ ನಿಷ್ಕರುಣೆಯಿಂದ ವಿರೂಪಗೊಳಿಸಿದ, ಸೀತೆಯ ಮನಃಸಂತೋಷಕ್ಕಾಗಿ ಮಧುರೆಯ ರಾಜಮಾರ್ಗದಲ್ಲಿ ತನ್ನ ಪಾಡಿಗೆ ತಾನು ನಡೆದು ಬರುತ್ತಿದ್ದ ವಿರೂಪಳಾದ ಕುಬ್ಜೆಯನ್ನು ತನ್ನ ಮಡದಿಯನ್ನಾಗಿ ಮಾಡಿಕೊಂಡು ಸ್ತ್ರೀಲಂಪಟನಾದ ಕಿರಾತನಂತೆ ವರ್ತಿಸಿದ. ಅವನು ಬಣ್ಣದಲ್ಲಿ ಅಸಿತ, ಅಂದರೆ ಕಪ್ಪು. ಬಣ್ಣದಲ್ಲಿ ಮಾತ್ರವಲ್ಲ ಚಾರಿತ್ರ್ಯದಲ್ಲಿಯೂ ಅಸಿತ, ಕಪ್ಪು. ಏಕೆಂದರೆ ಹಿಂದೆ ವಾಮನನಾಗಿ ಅವತರಿಸಿದಾಗ ತನ್ನ ಸರ್ವಸ್ವವನ್ನೂ ದಾನ ಮಾಡಿದ ಬಲಿಯನ್ನು ಪಾತಾಳಕ್ಕೆ ತಳ್ಳಿದ. ಇಂಥವನನ್ನು ವೇದವೇತ್ತರಾದ ಜ್ಞಾನಿಗಳೂ ಕೊಂಡಾಡುವರೆಂದರೆ ಇದು ಆಶ್ಚರ್ಯ ! ಅವನೊಡನೆ ಪ್ರಣಯ ವ್ಯವಹಾರ ಇನ್ನು 'ಅಲಂ' ಸಾಕು. ಆದರೂ ಹೆಣ್ಣಿನ ಸ್ವಭಾವದಿಂದ ನಾವು ಅವನ ವೃತ್ತಾಂತ ಶ್ರವಣವನ್ನು ಮಾತ್ರ ಬಿಡಲು ಅಸಕ್ತರಾಗಿರುವೆವು.

ಇಲ್ಲಿ ಗೋಪಿಯರ ಅಂತರಂಗದ ಭಾವ ಹೀಗಿದೆ— ವಾಲಿಯೆ ಬೇಡನಂತೆ ಅನ್ಯಾಯವಾಗಿ ಸುಗ್ರೀವನನ್ನು ಹೊಡೆದೋಡಿಸಿ ಅವನ ಹೆಂಡತಿಯನ್ನಿಟ್ಟುಕೊಂಡು ಅವಳ ಯಶಸ್ಸಿಗೆ ಕುಂದು ತಂದಿದ್ದ. ಆದ್ದರಿಂದ ರಾಮನೂ ಬೇಡನಂತೆ ಮರೆಯಲ್ಲಿ ನಿಂತು ಆ ವಾಲಿಯನ್ನು ಕೊಂದ. ಯೋಗಿಪ್ರಿಯನಾದ ರಾಮ ಸ್ವೈರಿಣಿಯಾಗಿ ಗಂಡಿನ ಬೇಟೆಯಾಡುತ್ತ ತಿರುಗುತ್ತಿದ್ದ ಶೂರ್ಪಣಖಿಗೆ ಯೋಗ್ಯ ಶಿಕ್ಷೆಯನ್ನೇ ವಿಧಿಸಿದ. ದೇವರಾಜನನ್ನು ಕಾಮಿಸಿ ಪತಿಶಾಪದಿಂದ ಶಿಲೆಯಾಗಿ ಬಿದ್ದಿದ್ದ ಅಹಲ್ಯೆಯನ್ನು ತಿರುಗಿ ಸ್ತ್ರೀಯನ್ನಾಗಿ ಮಾಡಿದ. ಸ್ತ್ರೀಗೆ ಮರುಳಾಗದೆ ಇರುವ ಕೃಷ್ಣನೆ ವಿರೂಪಳಾದ ಕುಬ್ಜೆಯನ್ನು ಸುಂದರ ಸ್ತ್ರೀಯನ್ನಾಗಿ ಮಾಡಿ ಅನುಗ್ರಹಿಸಿದ. ಬಲಿ

ಅನ್ಯಾಯವಾಗಿ ದೇವೇಂದ್ರನ ಸಿಂಹಾಸನವನ್ನು ಆಕ್ರಮಿಸಿ ಬಹಳ ಅಹಂಕಾರ ಪಟ್ಟಿದ್ದರೂ ಅವನನ್ನು ಕ್ಷಮಿಸಿ ಪಾತಾಳದಲ್ಲಿ ಚಕ್ರವರ್ತಿಯನ್ನಾಗಿ ಮಾಡಿದ್ದಾನೆ. ಮುಂದಿನ ಮನ್ವಂತರದಲ್ಲಿ ಉಚ್ಚೈಃಶ್ರವಸ್ ಮುಂತಾದ ಸಂಪತ್ತಿನಿಂದ ಯುಕ್ತವಾದ ಇಂದ್ರಪದವಿಯನ್ನು ಬಲಿಗೆ ನಿಶ್ಚಯವಾಗಿ ಕೊಡಲಿದ್ದಾನೆ ಎಂದೇ ವೇದವೇತ್ತರಾದ ಜ್ಞಾನಿಗಳು ಅವನನ್ನು ವಂದಿಸುತ್ತಾರೆ. ಬಣ್ಣದಲ್ಲಿ 'ಅಸಿತ' ಕಪ್ಪಾದರೂ ಮಹಿಮೆ ಯಲ್ಲಿ 'ಅಸಿತ' ಸತ್ಯ ಮುಕ್ತನಾದ್ದರಿಂದ 'ಅಲಂ' ವಿಶೇಷವಾಗಿ ಪ್ರೀತಿ ಮಾಡಲು ಯೋಗ್ಯನೆಂದೇ ನಾವು ಅವನ ವೃತ್ತಾಂತಶ್ರವಣವನ್ನು ಬಿಟ್ಟಿರಲಾರೆವು. (ಯೊಂ ಮೃಗಯುರಿವ ಕಪೀಂದ್ರಂ ಸುಗ್ರೀವಂ ವಿವ್ಯಧೇ ಸ್ತ್ರಿಯಂ ತತ್‌ಸಿಯೇ ರುವಮಾಂ ವಿರೂಪಾಂ ವಿಗತಂ ರೂಪಂ ಯಶಃ ಯಸ್ಯಾಸ್ತಾಂ ಅಕೃತ ತಂ ಕಪೀಂದ್ರಂ ವಾಲಿನಂ ವಿವ್ಯಧೇ । ನಾನಾಯೋऽನೇನಾನುಷ್ಠಿತ ಇತಿ ಭಾವಃ । ಸ್ತ್ರಿಯೋ ಜಿತಾ ಯೆನಾಸೌ । ಕಿನೋಃ ವಾಯುಜಯವತಃ ರಾತಂ ಮಿತ್ರಂ ಯಸ್ಯಸಃ ಸ್ತ್ರೀಜಿತೋ ಗೌತಮಭಾರ್ಯಾಂ ಪ್ರಾಪ್ತಃ ವಿರೂಪಾ ಶಿಲಾರೂಪಾಂ ತಾಂ ಸ್ತ್ರಿಯಮಕೃತ । ಬಲಿವಾಸಂ ಉಚ್ಚೈಃಶ್ರುವೋವಾಸಂ ತದ್ವಾಹನಕಮಿಂದ್ರ ಮಿತಿ ಯಾವತ್ ।)

**ಯದನುಚರಿತಲೀಲಾಕರ್ಣಪೀಯೂಷವಿಪ್ರುಟ್-**
**ಸಕೃದದನವಿಧೂತದ್ವಂದ್ವಧರ್ಮಾವಿನಷ್ಟಾಃ ।**
**ಸಪದಿ ಗೃಹಕುಟುಂಬಂ ದೀನಮುತ್ಸೃಜ್ಯ ದೀನಾ**
**ಬಹವ ಇಹ ವಿಹಂಗಾ ಭೈಕ್ಷ್ಯಚರ್ಯಾಂ ಚರಂತಿ ||೭||**

ಶ್ರೀಕೃಷ್ಣ ತಾನು ಅವತರಿಸಿದಂದಿನಿಂದಲೇ ಮಾಡಿ ತೋರಿದ ಲೀಲೆಗಳೆಲ್ಲವೂ ಕೇಳಲು ಕಿವಿಗೆ ಇಂಪು. ಆ ಕರ್ಣಾಮೃತದ ಒಂದು ಹನಿಯನ್ನಾದರೂ ಭಕ್ತರು ಒಮ್ಮೆ ಸವಿದರೆ ಸಾಕು. ರಾಗದ್ವೇಷಾದಿ ದ್ವಂದ್ವಗಳಿಗೆ ಸಿಲುಕದಂತಾಗುವರು. ತಾಪತ್ರಯಗಳಿಗೆ ಆಸ್ಪದವಾದ ಮನೆ ಮಠ ಪರಿವಾರಗಳ ಅಭಿಮಾನ ತೊರೆದು ಭಗವಂತನನ್ನೆ ಆಶ್ರಯಿಸುವರು. ಜ್ಞಾನಭಿಕ್ಷೆ ಎತ್ತುವುದಕ್ಕಾಗಿಯೆ ಸಂಚರಿಸುವರು. ಇಂಥ ಕೃಷ್ಣ ನಮ್ಮನ್ನು ಹಿಂದೆ ಕೈಗಳಿಂದ ಸ್ಪರ್ಶಿಸುತ್ತಿದ್ದನೆಂದರೆ ಅವನು ಎಂಥ ಕರುಣಾಳು ! ದುಂಬಿಯೆ, ನೀನು ಕೃಷ್ಣನಿಗೆ ಹೀಗೆ ಹೇಳು. ನಿನ್ನ ಲೀಲಾಮೃತ ವನ್ನು ಒಮ್ಮೆ ಕೇಳಿ ಸವಿದಮಾತ್ರಕ್ಕೆ ನಾವು ಬಹುಮಂದಿ ಗೋಪಿಯರು ಸತಿ-ಪತಿ ತಾಯಿ-ಮಗು ಎಂದು ಮುಂತಾದ ಸಂಬಂಧಗಳನ್ನೆಲ್ಲ ಜರಿದು ನಮಗಾಗಿ ದುಃಖಿಸುವ ಮನೆ ಪರಿವಾರದವರನ್ನೆಲ್ಲ ತೊರೆದು ಆಕಾಶದಲ್ಲಿ ನಿರಾಧಾರವಾಗಿ ಹಾರುವ ಹಕ್ಕಿಗಳಂತೆ ಎಲ್ಲೆಡೆ ಸಂಚರಿಸುತ್ತಿದ್ದೇವೆ. 'ನಮ್ಮ ಪ್ರಾಣೇಶ್ವರ ನಮ್ಮನ್ನು ತೊರೆದು ಹೋಗಿದ್ದಾನೆ ನಾವೇನು ಮಾಡಲಿ, ಹೇಳಿರಿ' ಎಂದು ಪ್ರತಿಯೊಬ್ಬರನ್ನು ಬೇಡುತ್ತಿದ್ದೇವೆ.

**ವಯಮೃತಮಿವ ಜಿಹ್ಮಂ ವ್ಯಾಹೃತಂ ಶ್ರದ್ದಧಾನಾಃ**
**ಕುಲಿಕರುತಮಿವಾಜ್ಞಾಃ ಕೃಷ್ಣವಧ್ವೋ ಹರಿಣ್ಯಃ ।**
**ದದೃಶಿರಸಕೃದೇತತ್ತನ್ನಖಸ್ಪರ್ಶತೀವ್ರ-**
**ಸ್ಮರರುಜ ಉಪಮಂತ್ರಿನ್ ಭಣ್ಯತಾಮನ್ಯವಾರ್ತಾ** ॥೮॥

ಬೇಡನ ಸಂಗೀತಧ್ವನಿ ಕೇಳಿ ನಂಬಿ ಮೋಸಹೋಗುವ ಅಜ್ಞ ಜಿಂಕೆಗಳಂತೆ ನಾವು ಕೃಷ್ಣನ ಪ್ರೇಯಸಿಯರು ಅವನ ಕಪಟದ ನುಡಿಗಳನ್ನು ಕೇಳಿ ನಂಬಿ ಮೋಸ ಹೋದೆವು. ಒಮ್ಮೆ ಮಾತ್ರ ಅವನು ನಮ್ಮೆದೆಯಲ್ಲಿ ಮೂಡಿಸಿದ ತೀವ್ರವಾದ ನಖಕ್ಷತದಿಂದ ಸುಖಕರವಾದ ಪೀಡೆಯನ್ನು ಅನುಭವಿಸಿದೆವು. ಮುಂದೆ ಅದೆಷ್ಟು ಬಾರಿ ಆಶ್ವಾಸನೆ ಕೊಟ್ಟು ನಮ್ಮನ್ನು ಅವನು ವಂಚಿಸಿದ್ದಾನೆ ! ಆಗಲಿ. ಅವನು ಈಗ ಮಧುರೆಯಲ್ಲಿ ಏನೇನು ಮಾಡುತ್ತಿದ್ದಾನೆ ? ಅವನ ವೃತ್ತಾಂತವನ್ನು ಹೇಳು.

**ಪ್ರಿಯಸಖ ಪುನರಾಗಾಃ ಪ್ರೇಯಸಾ ಪ್ರೇಷಿತಸ್ತ್ವಂ**
**ವರಯ ಕಿಮನುರುಂಧೇ ಮಾನನೀಯೋಽಸಿ ಮೇಽಂಗ ।**
**ನಯಸಿ ಕಥಮಿಹಾಸ್ಮಾನ್ ದುಸ್ತ್ಯಜಂ ದ್ವಂದ್ವಪಾರ್ಶ್ವಂ**
**ಸತತಮುರಸಿ ಸೌಮ್ಯ ಶ್ರೀರ್ವಧೂಃ ಸಾಕಮಾಸ್ತೇ** ॥೯॥

ಪ್ರಿಯಮಿತ್ರ, ನೀನು ಪ್ರಿಯತಮನ ಕಡೆಯಿಂದ ತಿರುಗಿ ನಮ್ಮೆಡೆಗೆ ಬಂದಿರುವಿ. ನಿನಗೇನು ಬೇಕು ಹೇಳು. ನೀನು ನಮಗೆ ಮಾನನೀಯನೆನಿಸಿರುವಿ. ನಮ್ಮನ್ನು ಅವನೆಡೆಗೆ ಕರೆದೊಯ್ಯುವಿಯೇನು? ಬಂಧುವಾದ ಆ ಕೃಷ್ಣನ ಸಾಮಿಪ್ಯ ನಮಗೆ ಬಿಡಲಾಗದುದು. ಆದರೆ ವಿರಹ ತಾಪದಿಂದ ಬೆಂದು ಬೆಂಡಾಗಿರುವ ಈ ಅವಸ್ಥೆಯಲ್ಲಿ ನಮ್ಮನ್ನು ಹೇಗೆ ಕರೆದೊಯ್ಯಬಲ್ಲೆ? ಒಂದು ವೇಳೆ ಕರೆದೊಯ್ದರೂ ಫಲವಿಲ್ಲ. ಅವನ ಎದೆಯಲ್ಲಿ ಸದಾ ರಮೆ ಸುಖವಾಗಿರುತ್ತಾಳೆ. ಅವಳು ನಮ್ಮಾಸೆ ಈಡೇರಲು ಬಿಡುವಳೇ? ಆದರೂ ನಮಗೆ ಆಸೆ ಇದ್ದೇ ಇದೆ. ಏಕೆಂದರೆ ರಮೆಯೂ ಸದಾ ಅವನೆದೆಯಲ್ಲಿರಬಯಸುವಳೆಂದಮೇಲೆ ಆ ಎದೆಯ ಆಲಿಂಗನ ಎಷ್ಟು ಸುಖಕರ ವಿದ್ದೀತು! ನಮ್ಮಲ್ಲಿಯೂ ರಮಾವೇಶವಿರುವುದರಿಂದ ಕೃಷ್ಣನ ಅಂಗಸಂಗ ದಾಸೆಯನ್ನು ನಾವಿರಿಸಿಕೊಂಡೇ ಇದ್ದೇವೆ. (ಸಾ ಆಕಂ ಸುಸುಖಂ ಯಥಾ ತಥಾ ಯಸ್ಯೋರಸಿ ಆಸ್ತೇ । ಸತತಂ ಶ್ರೀರ್ವಧೂಃ ಸಾಕಮಸ್ಮಾಭಿರಾಸ್ತೇ ।)

**ಅಪಿ ಬತ ಮಧುಪುರ್ಯಾಮಾರ್ಯಪುತ್ರೋಽಧುನಾಽಽಸ್ತೇ**
**ಸ್ಮರತಿ ಸ ಪಿತೃಗೇಹಂ ಸೌಮ್ಯ ಬಂಧೂಂಶ್ಚ ಗೋಪಾನ್।**
**ಕ್ವಚಿದಪಿ ಸ ಕಥಂ ನಃ ಕಿಂಕರೀಣಾಂ ಗೃಹೀತೇ**
**ಭುಜಮಗುರುಸುಗಂಧಂ ಮೂರ್ಧ್ನ್ಯಧಾಸ್ಯತ್ ಕದಾನು** ॥೧೦॥

ಕೃಷ್ಣನು ಈಗ ಮಥುರೆಯಲ್ಲಿ ಸುಖವಾಗಿರುವನೇ? ಇಲ್ಲಿ ಅವನ ತಂದೆತಾಯಿಗಳನ್ನೂ ಬಂಧುಗಳನ್ನೂ ಗೋಪಾಲಕರನ್ನೂ ನೆನೆಯುತ್ತಿರುವನೆ? ಮೋಹಿನಿಯಾಗಿ ಶಿವನನ್ನಾಲಿಂಗಿಸಿ ಅವನ ಮೈಗೆ ಕಂಪನ್ನಿತ್ತ ಆ ಕೃಷ್ಣನನ್ನು ಮಥುರೆಯ ಹೆಣ್ಣುಗಳು ಈಗ ಸೇವಿಸುತ್ತಿದ್ದಾರೆ. ನಮಗೆ ಗಂಡಂದಿರು ಮನೆಯಲ್ಲಿದ್ದರೂ ಕೃಷ್ಣನನ್ನೆ ನಾವೂ ಬಯಸುತ್ತಿದ್ದೇವೆ. ಏಕೆಂದರೆ ಅವನು ಮನ್ಮಥನಂತಿದ್ದಾನೆ! ಅವನು ಇಲ್ಲಿಗೆ ಎಂದು ಬರುತ್ತಾನೆ? ಅಗುರುಚಂದನ ಪರಿಮಳಯುಕ್ತವಾದ ತನ್ನ ತೋಳನ್ನು ದಾಸಿಯರಾದ ನಮ್ಮ ತಲೆಯ ಮೇಲೆ ಎಂದು ಇಡುತ್ತಾನೆ, ಹೇಳು. (ಓಃ ರುದ್ರಸ್ಯ ಸುಗಂಧೋ ಯೇನ ತಂ ಮಧುಪುರ್ಯಾಂ ಅಧುನಾ ಆಗುಃ ಅಂಗನಾಃ । ಸ್ಮರತಿ ಮನ್ಮಥನತ್ ಆಚರತಿ ।)

ಶ್ರೀ ಕೃಷ್ಣಾರ್ಪಣಮಸ್ತು ।

# ಶ್ರೀ ಸತ್ಯಧರ್ಮತೀರ್ಥರನ್ನು ಕುರಿತು ಪ್ರಕಟಣೆಗಳು

ರೂ.

1. ಗಂಗಾಲಹರೀ 1-00
2. ಗೋಪಿಗೀತ ಮತ್ತು ವೇಣುಗೀತ ಮತ್ತು ಭ್ರಮರಗೀತ 3-00
   ಮೂಲಶ್ಲೋಕಗಳು ಹಾಗೂ ಶ್ರೀಪಾದರ ಟಿಪ್ಪಣಿಯನ್ನು ಆಧರಿಸಿದ
   ಅನುವಾದ-ಈ ಕೃತಿಗಳ ಅನುವಾದಕರು
   —ಶ್ರೀ ಹಯವದನ ಪುರಾಣಿಕರು
3. *ತತ್ತ್ವಸಂಖ್ಯಾನ ಹಾಗೂ ಶ್ರೀಮದ್ಭಾಗವತ ಟಿಪ್ಪಣಿಗಳು 3-00
   ಶ್ರೀಪಾದರ ತತ್ತ್ವಸಂಖ್ಯಾನ ಟಿಪ್ಪಣಿಯ ಸಮೀಕ್ಷೆ ಹಾಗೂ ಶ್ರೀಮದ್ಭಾಗವತ
   ಟಿಪ್ಪಣಿಯ ವೈಶಿಷ್ಟ್ಯ ಕುರಿತು ಎರಡು ಪ್ರಬಂಧಗಳು
   —ಶ್ರೀ ಡಿ. ಪ್ರಹ್ಲಾದಾಚಾರ್ಯರು
   —ಶ್ರೀ ಜಿ. ಗುರುವೆಂಕಟಾಚಾರ್ಯರು
4. *ವಿದುರ ನೀತಿ
   ಮೂಲಶ್ಲೋಕಗಳು, ಶ್ರೀಪಾದರ ಟಿಪ್ಪಣಿಯನ್ನು ಆಧರಿಸಿದ ಅನುವಾದ
   —ಅನುವಾದಕರು—ಶ್ರೀ ವ್ಯಾಸನಕೆರೆ ಪ್ರಭಂಜನಾಚಾರ್ಯರು
5. ತತ್ತ್ವಸಂಖ್ಯಾನ 20-00
   ಶ್ರೀ ಜಯತೀರ್ಥರ ಟೀಕಾ ಹಾಗೂ ಶ್ರೀ ಸತ್ಯಧರ್ಮರ ಟಿಪ್ಪಣಿ ಅನುವಾದ ಸಹಿತ
   —ಶ್ರೀ ಡಿ. ಪ್ರಹ್ಲಾದಾಚಾರ್ಯರು

---

*ಪ್ರತಿಗಳು ಮುಗಿದಿವೆ

---

## ಶ್ರೀ ಚರಣರುಗಳ ಜೀವನ ಹಾಗೂ ಕೃತಿಗಳ ಪರಿಚಯ

6. ಶ್ರೀ ಸತ್ಯಧರ್ಮತೀರ್ಥರು 3-00
7. ಶ್ರೀ ಸತ್ಯಪರಾಯಣತೀರ್ಥರು 2-00
8. ಶ್ರೀ ಸತ್ಯವರತೀರ್ಥರು 2-00
   —ಶ್ರೀ ನವರತ್ನ ನಾರಾಯಣಮೂರ್ತಿ
9. ಶ್ರೀ ಸತ್ಯಸಂಧತೀರ್ಥರು 2-00
   —ಶ್ರೀ ಜಿ. ಗುರುವೇಂಕಟಾಚಾರ್ಯ
   —ಶ್ರೀ ನವರತ್ನ ನಾರಾಯಣಮೂರ್ತಿ
   —(ಶ್ರೀ ರಾಘವೇಂದ್ರ ಸ್ವಾಮಿಗಳ ಮಠ, ಜನ್ನಾಪುರ, ಭದ್ರಾವತಿಯಲ್ಲಿ
   ಖರೀದಿಸಬಹುದು)
10. ಶ್ರೀ ರಘೋತ್ತಮ ತೀರ್ಥರು 3-00
    —ಶ್ರೀ ಸತ್ಯಧ್ಯಾನ ಕಟ್ಟಿ
    —ಶ್ರೀ ನವರತ್ನ ನಾರಾಯಣಮೂರ್ತಿ
11. ಶ್ರೀ ಸತ್ಯಬೋಧತೀರ್ಥರು 4-00
    —ಶ್ರೀ ನವರತ್ನ ನಾರಾಯಣಮೂರ್ತಿ
12. ಶ್ರೀ ವಿಷ್ಣುತೀರ್ಥರು 2-00
13. ಶ್ರೀ ಸತ್ಯಧ್ಯಾನತೀರ್ಥರು 3-00
    —ಶ್ರೀ ನವರತ್ನ ನಾರಾಯಣಮೂರ್ತಿ

ಎಲ್ಲ ಪುಸ್ತಕಗಳು (9ನೆಯದು ಬಿಟ್ಟು) ಕೆಳಗೆ ಕಂಡ ಕಡೆ ಮಾರಾಟಕ್ಕೆ ಸಿದ್ಧವಿವೆ :

ಸಂಚಾಲಕರು,

**ಶ್ರೀ ಸತ್ಯಧರ್ಮತೀರ್ಥ ಸೇವಾ ವೃಂದ,**

ರಂಗರಾವ್ ರಸ್ತೆ, ಶಂಕರಪುರಂ, ಬೆಂಗಳೂರು-560 004